ಪ್ರಥಮ ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ 103

ವಿಚಾರ ಸಾಹಿತ್ಯ

# ಅನರ್ಥಕೋಶ

ನಾ. ಕಸ್ತೂರಿ





ಕರ್ನಾಟಕ ಸರ್ಕಾರ 1983

ಶ್ರೀ ಕಾಶೀ ಜಗದ್ಗುರು ವಿಶ್ವಾರಾಧ್ಯ ಜ್ಞಾನಸಿಂಹಾಸನದ
ಜ್ಞಾನ ಮಂದಿರಕ್ಕೆ ದಾವಣಗೆರೆ ವೇ|| ಬಿ. ಎಂ. ಚನ್ನಬಸಯ್ಯನವರು
ಸಮರ್ಪಿಸಿದ್ದು.

ತಾ. 20-1-1988 ನೇ ಬುಧವಾರ

# ಅನರ್ಘ ಕೋಶ

ನಾ. ಕಸ್ತೂರಿ




ವಿಶ್ವ ಕನ್ನಡ ಸಮ್ಮೇಳನ
14–3ಎ, ನೃಪತುಂಗ ರಸ್ತೆ
ಬೆಂಗಳೂರು - 560 002

ANARTHAKOSHA by N. Kasturi Published by K. Jayacharaya K.A.S., Additional Director, Directorate of Kannada & Culture (Viswa Kannada Sammelana) 14/3A, Nrupathunga Road, Bangalore-560 002—Pages 168+XIII 1983—5000 Copies.





Edition : SECOND

ಬೆಲೆ : 2-00



ಮುದ್ರಕರು :
ಪೂರ್ಣಿಮಾ ಪ್ರಿಂಟರ್ಸ್, ಮಾಗಡಿ ರೋಡ್, ಬೆಂಗಳೂರು - 560 023.

ಆರ್. ಗುಂಡೂರಾವ್

ಮುಖ್ಯ ಮಂತ್ರಿ




ವಿಧಾನಸೌಧ

ಬೆಂಗಳೂರು

ದಿನಾಂಕ ೧೮-೯-೧೯೮೨

## ಸಂಕಲ್ಪ...ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆ ಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನೆಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಬಹುಕಾಲ ಇದರ ಸವಿ ನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ, ಸುಲಭ ಬೆಲೆಗೆ

ಒದಗಿಸುವುದು ಈ ಯೋಜನೆಗಳಲ್ಲಿ ಒಂದು. ಇದರಂತೆ ಒಂದುನೂರಾ ಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆ ಮಾಡಿ ಪ್ರಕಟಿಸುತ್ತಿದ್ದೇವೆ. ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರ ಸಾಹಿತ್ಯದ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು, ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯ ಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ ಇಂಗ್ಲಿಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯ ಮಾಲೆಯ ಈ ಕೃತಿರತ್ನಗಳನ್ನು ಸಹೃದಯ ವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ನಭೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ, ಮಂಗಳವುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ರಾ. ಗುಂಡೂರಾವ್

ಮುಖ್ಯ ಮಂತ್ರಿಗಳು

# ಓದುಗನಿ(ರಿ?)ಗೆ ಒಂದು ಮಾತು

ಶ್ರೀಮಾನ್ ಟಿ. ಎಸ್. ವೆಂಕಣ್ಣಯ್ಯನವರು ನನ್ನ ಕನ್ನಡ ಗುರುಗಳ-ಲ್ಲೊಬ್ಬರು; ಅವರನ್ನು ನಾನು ಎಂದೆಂದಿಗೂ ಮರೆಯುವಂತಿಲ್ಲ. ಅವರ ಸಹವಾಸಭಾಗ್ಯ ನನಗೆ ದೊರೆತಾಗ, ನಾನು ಇನ್ನೂ 'ಆಟ' 'ಊಟ' 'ಓಟ' ಗಳನ್ನು ತಟಾಯಿಸಿ, 'ಮುಂದೆ ಬಂದರೆ ಹಾಯಬೇಡಿ, ಹಿಂದೆ ಬಂದರೆ ಒದೆಯಬೇಡಿ' ಎಂದು ಒದರುತ್ತಿದ್ದ ಆರು ವರ್ಷದ ಕನ್ನಡ 'ಮಾಣಿ.' ಅವರು ನನ್ನನ್ನು ಹುರಿದುಂಬಿಸಿದರು; ಅಡಿ ಇಡಿಸಿ ನಡೆಯಿಸಿದರು; ತ್ರಿಪದಿ ಗುಡ್ಡಗಳನ್ನೂ, ವಚನ ಸರೋವರಗಳನ್ನೂ, ಕುಮಾರವ್ಯಾಸ ಭಾರತದ ಗೇರುಸೊಪ್ಪೆಯನ್ನೂ, ಪಂಪ ಸಹ್ಯಾದ್ರಿಯನ್ನೂ, ತೋರಿಸಿ ಉತ್ಸಾಹ ತುಂಬಿದರು. ಪ್ರಬುದ್ಧ ಕರ್ಣಾಟಕಕ್ಕಾಗಿ ನನ್ನಿಂದ ಹಲವಾರು ಲೇಖನ-ಗಳನ್ನು ಬರೆಯಿಸಿದರು; ನಾನೇ ಸ್ಫೂರ್ತಿಗೊಂಡು ರಚಿಸಿದ ಒಂದು ಕವನ-ವನ್ನು ಮೆಚ್ಚಿ, ಅದರಲ್ಲಿ ಅಚ್ಚು ಹಾಕಿಸಿದರು. ಬೂದಿಯನ್ನೂ ಊದಿ ಬೆಳಗಿಸುವ ಕಾವು ಇತ್ತು, ಅವರ ಉಸಿರಲ್ಲಿ.

ಅವರ ಸ್ಮಾರಕವಾಗಿ ಒಂದು ಗ್ರಂಥಮಾಲೆಯನ್ನು ಅವಿಚ್ಛಿನ್ನವಾಗಿ ಹೊರಡಿಸುವ ಹೊಣೆಗಾರಿಕೆಯನ್ನು. ಅವರ ಮಿತ್ರ ಹಾಗೂ ಅವರ ಶಿಷ್ಯ ವೃಂದದ ಪರವಾಗಿ, ಅವರ ತಮ್ಮಂದಿರಾದ ಶ್ರೀ ತ. ಸು. ಶಾಮರಾವ್ ಅವರು ಹೊತ್ತು ನಿಂತಿದಾರೆ.

ಶ್ರೀ ಶಾಮರಾವ್, ಇಂಟರ್, ಬಿ. ಎ., ತರಗತಿಗಳಲ್ಲಿ, ನನ್ನ ವಿದ್ಯಾರ್ಥಿ:

ನನ್ನ ಗುರುಚರಣದಲ್ಲಿ ಪುಷ್ಪವೊಂದನ್ನರ್ಪಿಸಬೇಕೆಂದು, ನನ್ನ ಶಿಷ್ಯ, ಸೂಚನೆ ಕೊಟ್ಟಾಗ, ನನಗೆ ಅತ್ಯಾನಂದವಾಯಿತು. ಹಲವಾರು ವರ್ಷಗಳಿಂದ ನಾನು ಗುರುತು ಹಾಕಿರಿಸಿದ್ದ ಈ 'ಅನರ್ಥಕೋಶ'ವನ್ನು ಕಳುಹಿಸಿದೆ. 'ಕನ್ನಡಂ ಕತ್ತುರಿಯಲ್ತೆ' ಎಂದು ನನ್ನನ್ನು ಪ್ರೀತಿಯಿಂದ ಬರಮಾಡಿಕೊಂಡ ಕನ್ನಡ ತಾಯಿಗೆ ಇದು ಒಂದು ಕುಹಕದ ಕಾಣಿಕೆ! ಅಳಿಲುಸೇವೆ. ಹೊಕ್ಕ ಮನೆಯನ್ನು ಚೊಕ್ಕಮಾಡಲು ನಾನು 'ಕುಕ್ಕು' ಮಾಡಿದ ಒಂದು ಬುಕ್ಕು.

ಇದೀಗ ಇದು ಧಾರವಾಡ ಸಮಾಜ ಪುಸ್ತಕಾಲಯದಿಂದ ದ್ವಿತೀಯ ಮುದ್ರಣ ಕಾಣುತ್ತಿರುವುದು ನನಗೆ ಸಂತೋಷ ತಂದಿದೆ.

ಸಂಪಗೆಗಿಂತಲು ತಂಪಗೆ ಎಂದರೆ ಇಂಪಾಗಿರುವುದು ಕೇಳ್ವರಿಗೆ—ಎಂದು ಕುವೆಂಪು ಅವರು ೩೮ ವರ್ಷಗಳ ಹಿಂದೆಯೇ ಸಾರಿದರು. ಆ ಕವನವನ್ನು ಅವರು ಬರೆದು ಮುಗಿಸಿದ ಕೂಡಲೇ ಅವರು ನನಗೆ ಅದನ್ನು ಓದಿ ತೋರಿಸಿದ ನೆನಪಿದೆ. ಬಹುಶಃ, ಅಂದೇ, ಆ ಗಳಿಗೆಯಲ್ಲೇ, ಈ ಅನರ್ಥಕೋಶದ ಕಲ್ಪನೆ ನನ್ನಲ್ಲಿ ಮೂಡಿರಬೇಕೆನಿಸುತ್ತದೆ. ಅನಂತರ, ಕುವೆಂಪು ಅವರೇ ನನ್ನನ್ನು ALICE IN WONDERLAND ಎಂಬ ಸ್ವಪ್ನಕಥಾರತ್ನವನ್ನು ಕನ್ನಡಿಸುವಂತೆ ಪ್ರೇರೇಪಿಸಿದರು. ಅದರ ಗ್ರಂಥಕರ್ತನ ಚಮತ್ಕಾರಗಳ ಪೈಕಿ, ಆತನ ಹೊಸ ಹೊಸ ಪದಪ್ರಯೋಗಗಳೂ, 'ಬೆಸುಗೆ ಮಾತು'ಗಳೂ ನನ್ನ ತಲೆಯೊಳಗೆ ಮನೆ ಮಾಡಿದುವು; ಅಲ್ಲಿಂದೀಚೆಗೆ ನಾನು ಬರೆದ ಕಥೆ, ಕಾದಂಬರಿ, ಹರಟೆ, ಅಣಕು, ಮಿಣಕು ಇವುಗಳಲ್ಲೆಲ್ಲ ನನ್ನ ಲೇಖನಿಯಿಂದ ಜಾರಿದ ಇಂಥ ಅನೇಕ ಹೊಸ ಪದಗಳು ಸೇರಿಕೊಂಡಿವೆ. ಶ್ರೀ ವಿ. ಕೃ. ಗೋಕಾಕರೂ, ಶ್ರೀ ದ. ರಾ. ಬೇಂದ್ರೆಯವರೂ 'ಚಕ್ರದೃಷ್ಟಿ' 'ಗಾಳಿ ಗೋಪುರ'ಗಳ ಮುನ್ನುಡಿಗಳಲ್ಲಿ ಈ ನನ್ನ ಚಾಳಿಯನ್ನು ಮೆಚ್ಚಿದ್ದಾರೆ. ಶ್ರೀ ಡಿ. ವಿ. ಜಿ. ಯಂತೂ ನನ್ನ ಬುರುಡೆಗೆ ಮಸಿ ತುಂಬುತ್ತಲೇ ಇದ್ದರು.

'ಜನ ಮೆಚ್ಚಿ ಹುಚ್ಚನ್' ಎಂಬಂತೆ, ನಾನು 'ಖಾರಾಂತ' ಎಂಬ ಅಣಕು ಹೆಸರಿನಲ್ಲಿ ಕಾರಂತರು ಅರ್ಥಕೋಶ ಬರೆದಂತೆ, 'ಕೊರವಂಜಿ' ಯ ಪುಟಗಳ ಮೂಲಕ, ಒಂದು ಅನರ್ಥಕೋಶವನ್ನೇ ಪ್ರಾರಂಭಿಸಿದೆ. ಆಗಾಗ,

ಹರುಕುಮುರುಕಾಗಿ ಹೊರಬಂದ ಆ ಕೃತಿಯು ಮೂಲಸ್ವರೂಪವೇ ಇದು.

ಹಳೆಯ ಮಾತುಗಳು ಅನೇಕ, ಈಗ, ಮರದಡಿಯ ಸೀತೆಯಂತೆ, ಅರ್ಥ ಮರೆತು, ಗೋಳಿಡುತ್ತಿವೆ; ಹೊಸ ಅರ್ಥವನ್ನೂ ಹಲವು ವೇಳೆ ವಿಪರೀತಾರ್ಥ ವನ್ನು ತೊಟ್ಟು ತಲೆ ತಗ್ಗಿಸಿವೆ. ಹೊಸ ಮಾತುಗಳನ್ನು ರಚಿಸಿ ನಾವು ನಮ್ಮ ಬಾಳನ್ನು ಹಸನಾಗಿಸಬೇಕೆಂದು ದಿ. ಗೋವಿಂದ ಪೈ ಅವರೂ ಕೂಡ ಒತ್ತಿಹೇಳಿ, ಕನ್ನಡನಾಡಿನ ಮೇಧಾವಿಗಳನ್ನೂ ಕೀಧಾವಿಗಳನ್ನೂ ಅದಕ್ಕಾಗಿ ಕರೆದರು. ಹೊಸಲು ದಾಟಿದರೆ ಹೊಸ ಅಯ್ಯ, ಎನ್ನುತ್ತಾರೆ. ಹಾಗೆಯೇ ಸಂಸ್ಕೃತ-ದಿಂದ ಕನ್ನಡಕ್ಕೂ, ಇತರ ಭಾಷೆಗಳಿಂದ ನಮ್ಮ ಭಾಷೆಗೂ, ಶತಮಾನದಿಂದ ಶತಮಾನಕ್ಕೂ, ಹೊಸಲು ದಾಟಿದಾಗೆಲ್ಲ, ಅವು ಹೊಸ ಅರ್ಥ ತಾಳಿ ಹೊಸ ಅಯ್ಯಗಳಾಗುತ್ತವೆ. ಇಂಥವು ಅನೇಕ ಈ ಗ್ರಂಥದಲ್ಲೂ ಇವೆ.

ಇಂಗ್ಲೀಷಿನಲ್ಲಿ AMBROSE BIERCE ಎಂಬುವರ DEVIL'S DICTIONARY ಇದೆ; COMIC DICTIONARY ಎಂಬ ಒಂದು ಅಮೇರಿಕನ್ ಗ್ರಂಥವನ್ನೂ ನಾನು ನೋಡಿದ್ದೇನೆ.

ಆದರೆ ಅವೆರಡರಲ್ಲೂ ಗ್ರಂಥಕರ್ತರು ಹೊಸ ಪದಗಳ ನಿರ್ಮಾಣಕ್ಕೆ ಹೊರಟಿಲ್ಲ. ನನ್ನ ಅಭಿಪ್ರಾಯದಲ್ಲಿ, ಇಂಥ ಒಂದು 'ಶಬ್ದಕೋಶ' ಹೊರ ದೇಶಗಳ ಯಾವ ಭಾಷೆಯಲ್ಲೂ ಇಲ್ಲ; ಭರತಖಂಡದ ಭಾಷೆಗಳಲ್ಲಂತೂ, ಇದು ನವನವೀನ.

ಆದರೊಂದು ಮಾತು. "ನವೀನಮಿತ್ಯೇವ ನ ಸಾಧು ಸರ್ವಂ"; ಅಲ್ಲಲ್ಲಿ ಹಲವು ಕೆಲವು ಅಸಾಧು ಇರಬಹುದು; ಅನಿವಾರ್ಯವಾದ ಅನರ್ಥ ಗಳಲ್ಲಿ ಅವೂ ಸೇರಿವೆ.

ಸದ್ಯಕ್ಕೆ, ನನ್ನದು ಒಂದೇ ಒಂದು ಬಿನ್ನಹ. ಇದನ್ನು ಒಟ್ಟಿಗೆ ಒಂದೇ ಕೂರಲ್ಲಿ 'ಪುಟಪುಟ' ನೆ ಓದಬೇಡಿ. ಗ್ರಂಥವನ್ನು ಕೊಂಡು, ಕೈಗೆ ಎಟಕು ವಷ್ಟು ದೂರದಲ್ಲಿರಿಸಿಕೊಳ್ಳಿ. ಕಣ್ಣಲೇನೋ ಬಂದು, ತುಟಿಯಲೇನೋ ನಿಂತಾಗ, ಸರಕ್ಕನೆಳೆದು, ನಾಲ್ಕೈದು ಮಾತುಗಳನ್ನೂ ಅವುಗಳ ಅರ್ಥವನ್ನೂ

ಓದಿ. ಥಟಕ್ಕನೆ ರುಚಿ ಗೊತ್ತಾಗದಿದ್ದರೆ, ಎರಡುಬಾರಿ ಆಕಳಿಸಿ, ಗ್ರಂಥವನ್ನು ಇನ್ನೂ ಕೊಂಚ ದೂರದಲ್ಲಿರಿಸಿ, ಸಮಾಧಾನವಾಗಿರಿ.

ನಾ. ಕಸ್ತೂರಿ

# ಅನರ್ಥಕೋಶ

## ಅ

ಅ—ನಿಷೇಧಾರ್ಥಸೂಚಕ : ಅಹಿಂಸೆ, ಅನ್ಯಾಯ, ಅಬಿಸೀನಿಯ, ಅಸಾವೇರಿ. ಇತ್ಯಾದಿ ನೋಡಿ: 'ಅಕ್ಷರಾಣಾಂ ಅಕಾರೋಸ್ಮಿ' ಎಂಬ ಗೀತಾ ವಾಕ್ಯವಂತೆ, ಅನಿತ್ಯ ಎಂದರೆ ದೇವರು ನಿತ್ಯ, ಅಸತ್ಯ ಎಂದರೆ ದೇವರು ಸತ್ಯ ಎಂದೇ ಅರ್ಥ.

ಅಕಟಕಟ—ನಾವು ಹೀಗೆ ರೋದಿಸುತ್ತಿದ್ದಾಗ, ತಮಿಳರು ಅಯ್ಯೋ ಎನ್ನುತ್ತಿದ್ದರು.

ಅಕಲಾಯ—ಅಪ್ರಯೋಜಕ : ಕಲಾಯ ಇಲ್ಲದ ಹಿತ್ತಾಳೆ ತಾಮ್ರ ಪಾತ್ರೆಗಳಂತೆ.

ಅಕಾಲವೃಷ್ಟಿ—ವೈಜ್ಞಾನಿಕ ಅಥವಾ ಪರ್ಜನ್ಯಜಪತಪೋಪಾಯಗಳ ಮೂಲಕ ಮೋಡಗಳಿಂದ ಮಳೆ ಹಿಂಡುವಿಕೆ.

ಅಕ್ಕಜ—ಕರುಬು : ಅಕ್ಕನನ್ನು ನೋಡಿ ತಂಗಿಗಾಗುವ ಕರುಬಿನಂತೆ.

ಅಕ್ಕರೆ—ಅಕ್ಕತಂಗಿಯರಿಗಿರುವ ಪ್ರೀತಿ, ಅಥವಾ, ಅದಕ್ಕೆ ಸಮವಾದದ್ದು.

ಅಕ್ಕಿ—ಇದರ ಮೇಲಿನ ಪ್ರೀತಿ ಹೆಚ್ಚಿದಂತೆಲ್ಲ, ನೆಂಟರ ಮೇಲಿನ ಪ್ರೀತಿ ಕಡಿಮೆಯಾಗುತ್ತದೆ; ಸತ್ವ ಸಾಲದ ಆಹಾರ-ಪದಾರ್ಥ : ಅಕ್ಕಿ ತಿಂದು ಹಕ್ಕಿಯ ಹಾಗಾದ, (ಗಾದೆ); ಊಟಕ್ಕೇಳೋ ಗುಂಡಾ ಅಂದರೆ, ಯಾವ ಅಕ್ಕಿ ಬೇಯಿಸಿದಿ, ಅಂದ, (ಗಾದೆ) : ಅಕ್ಕಿಗೆ ಅಲೆದಾಟ ಸವುದೆಗೆ ಪ್ರಾಣಸಂಕಟ (ಗಾದೆ).

ಅಕ್ರಮಾದಿತ್ಯ—ಪ್ರಜಾಹಿತಕ್ಕೆ ವಿರೋಧವಾಗಿ ರಾಜ್ಯಭಾರ ನಡೆಸುವ ರಾಜರುಗಳಿಗೆ ಈ ಬಿರುದು ಸಲ್ಲುತ್ತಿತ್ತಂತೆ.

ಅಕ್ರೂರ—ರಿಟೈರಾದ ಉನ್ನತಾಧಿಕಾರಿ

ಅಖಂಡಕರ್ನಾಟಕ—ಈ ನಾಟಕ ಬಹುದಿನದಿಂದ ನಡೆದು ಬಂದಿತ್ತು.

ಅಗಸ—ಕಲ್ಲುಬಂಡೆಗಳನ್ನು ಒಡೆಯಲು ಹಗಲೆಲ್ಲ ಪ್ರಯತ್ನಿಸುವ ಧೀರ, ನಮ್ಮ ಬಟ್ಟೆಗಳಿಂದ ; ಈತನ ಕತ್ತೆಯನ್ನು ಡೊಂಬನಿಗೆ ದಾನಮಾಡಿ ಹಲವರು ಇವನಿಗೆ ಪುಣ್ಯ ಆರ್ಜಿಸಿಕೊಟ್ಟಿದ್ದಾರೆ; ಅರಿವೆಯನ್ನು ಇವನು ಹರಿವೆ ಎಂತಲೇ ಹೇಳುವನು ; ಕೊಟ್ಟದ್ದು ಅಗಸನಿಗೆ, ಉಟ್ಟದ್ದು ನಮಗೆ(ಗಾದೆ): ಹೊಸಪರಲ್ಲೇ ಆಗಸ ಹೊಳೆಯಲ್ಲಿ ತೇಲಿಸಿದ (ಗಾದೆ).

ಅಗಸ್ತ್ಯ—ಒಬ್ಬ ಪ್ರಖ್ಯಾತ ಗುಟುಕು ಜೀವಿ.

ಅಗಸ್ತ್ಯಭ್ರಾತ—ಭಾರಿ ಹುದ್ದೆಯಲ್ಲಿರುವವರ ನಂಟತನ ನಟಿಸಿ ಹೊಟ್ಟೆ ಹೊರೆದು ಕೊಳ್ಳುವವ.

ಅಗ್ನಿತೀರ್ಥ—ವ್ಹಿಸ್ಕಿ.

ಅಗ್ನಿಮಿತ್ರ—ಪೆಟ್ರೋಲ್.

ಅಗ್ನಿಹೋತ್ರ—ಬಿಡುವಿಲ್ಲದೆ ಸಿಗರೇಟು ಸೇದುವವ.

ಅಚ್ಚಾತುರ್ಯ—ಅಚ್ಚು ಮಾಡುವಾಗಿನ ಚಾತುರ್ಯ, ಬರಹಗಾರರು ಮಾಡುವ ತಪ್ಪುಗಳನ್ನು ಸರಿಪಡಿಸುವ ಜಾಣತನ; ಪೊಳೆ ಜೋಡಿಸು ವುದರಿಂದ ಹೊಸ ಭಾಷಾಪ್ರಯೋಗಗಳನ್ನು ರಚಿಸುವ ಚಮತ್ಕಾರ.

ಅಚ್ಚುಕನ್ನಡ—ಅಚ್ಚು ಮಾಡುವವರ ಕೈಕೊಳೆಯಾಗದಷ್ಟು ಸಭ್ಯವಾದ ಕನ್ನಡ ಶೈಲಿ.

ಅಚ್ಚುಕಟ್ಟು—ನಮ್ಮ ಗೃಹಸ್ಥಜೀವನವನ್ನು ನಾವು ಅಳವಡಿಸಿಕೊಂಡಿರುವ ರೀತಿ; ಇತರರಿಗೆ ಆ ರೀತಿ ತಿಳಿಯದೆಂಬುದೇ ನಮ್ಮ ನಂಬಿಕೆ.

ಅಜಾಗಳಸ್ತನ—ಕೆಲಸಕ್ಕೆ ಬಾರದ ಡಿಗ್ರಿ.

ಅಜಾತಶತ್ರು—ತಂದೆಯನ್ನು ಕೊಂದು ಸಿಂಹಾಸನವನ್ನೇರಿದ ಒಬ್ಬ ರಾಜ; ಆದ್ದರಿಂದ, ಅವನನ್ನೆದುರಿಸಲು ಎಲ್ಲರೂ ಹೆದರಿದ್ದರು.

ಅಜ್ಞಾತವಾಸ—ಒಲೆಮರೆಯ ತಾಯಿ.

ಅಜೀರ್ಣ—ತಿಂದದ್ದನ್ನು ಅರಗಿಸಲಾರದೆ ಒದ್ದಾಡುವ ಸಾರ್ವಜನಿಕ ನೌಕರರ ಪಾಡು; ಮಣ್ಣಾಸೆಯಿಂದ ಕೆಲವರಿಗೆ ಈ ರೋಗ ಬರುವುದುಂಟಂತೆ.

ಅಜ್ಜಿ—ಈಕೆ ಸಾಕದ ಮಗು ಯಾತಕ್ಕೂ ಬರದು, ಎಂದು ಹೇಳುತ್ತ ಅಂಥ

ಮಕ್ಕಳು ಸೋಮಾರಿತನವನ್ನೇ ಅವಲಂಬಿಸುತ್ತಾರೆ.

ಅತಾಣ—ಗಾಯಕರ ಅಸ್ತ್ರಗಳಲ್ಲಿ ಇದೂ ಒಂದು.

ಅಡಕೆ—ಅಡಕೆ ಕದ್ದಾಗ ಬೈಯದಿದ್ದರೆ, ಆನೆಯನ್ನೇ ಕದ್ದಾನು, ಹುಡುಗ.

ಅಡಿ—ಅಡಿಯ ಮುಂದಿಡೆ ಸ್ವರ್ಗ! ಆದ್ದರಿಂದ, ಸಾಮಾನ್ಯವಾಗಿ ಎಲ್ಲರೂ ನಿಂತಲ್ಲೇ ನಿಂತಿರುತ್ತಾರೆ; ಕೆಲವರು ಹಿಂದಕ್ಕೆ ಸರಿಯುವುದೂ ಉಂಟು.

ಅಡಿಕೆ—ಹಲ್ಲುಗಳನ್ನು ಹಿಡಿದು ನೋಡುವುದಕ್ಕಿಂತ, ಇದನ್ನು ಬಾಯಿಗೆ ಹಾಕಿ ಅಗಿದರೆ, ಅವುಗಳ ಗಟ್ಟಿ ತಿಳಿದೀತು.

ಅಡುಗೆ—ಸಂಪಾದಿಸಿ ತಂದದ್ದನ್ನು ಮನೆಯಲ್ಲಿ ಹಾಳುಮಾಡುವ ವಿಧಾನಗಳಲ್ಲೊಂದು; ಇವರ ಅರಿವಿಲ್ಲದ್ದರಿಂದಲೇ ಆಸ್ಪತ್ರೆಗಳೆಲ್ಲ ಭರ್ತಿಯಾಗಿರುವುದು; ಅಡುಗೆಗೆ ಹೆಂಗಸರೇ ಯೋಗ್ಯರು: ಎಂಬುದು ಕೇವಲ ಸ್ತೋತ್ರದ ಮಾತು.

ಅಡುಗೆಯವ—ಯಜಮಾನನಿಗಿಂತ ಪುಷ್ಕಳವಾಗಿ ಹಾಲು-ತುಪ್ಪ-ಮೊಸರು ತಿಂಬುವವ.

ಅಡ್ಡನಾಮ—ಹಣೆ ನೋಡಿ ಯಾರೋ ಹಾಕಿದ ಅಡ್ಡ ಹೆಸರು.

ಅಡ್ಡಹಾದಿ—ಇದನ್ನು ಹಿಡಿದರೆ, ಅದು ನಮ್ಮನ್ನೇ ಹಿಡಿದೆಳೆದು ಬಿಡುತ್ತದೆ.

ಅಣಕ—'ಇದು ಫಲಕಾರಿಯಾಗಲು ಮೆದುಳಿನ ಚಿಪ್ಪು ಅರ್ಧ ಇಂಚಿಗಿಂತ ತೆಳ್ಳಗಿರಬೇಕೆಂದು ವೈಜ್ಞಾನಿಕರು ಹೇಳುತ್ತಾರೆ,' ಎಂದು ಕಾರಂತರು ಹೇಳುತ್ತಾರೆ.

ಅಣಬೆ—ಅಣಬೆ ಸತ್ತಿಗೆಯುಲ್ಲ ಎಂದು ಸರ್ವಜ್ಞನೇ ಹೇಳಿರುವನಾದರೂ ನಾಯಿಗಳು ಅದನ್ನೊಪ್ಪಿಲ್ಲವೆಂದು ತೋರುತ್ತದೆ.

ಅಣಿಷ್ಟ—ಅತೀವ ಅನಿಷ್ಟ; ಭಾರತ ಸಂಸ್ಕೃತಿಗೆ ಇಷ್ಟವಲ್ಲದ ಮಹಾ ಅಣುಬಾಂಬು!

ಅಣುಕಂಪ—ಒಂದು ಊರಲ್ಲಿ ಅಣುಬಾಂಬು ಸಿಡಿದಾಗ ನೆರೆಯೂರುಗಳಲ್ಲಾಗುವ ಸಹತಾಪ.

ಅಣುತಾಪ—ಕಲ್ಲುಮನವನ್ನು ಕರಗಿಸುವ ಶಕ್ತಿ ಇಲ್ಲದಿದ್ದರೂ, ಕಲ್ಲುಬಂಡೆಗಳನ್ನು ಕರಗಿಸಿ ನೀರು ಮಾಡಬಲ್ಲ ಹೈಡ್ರೋಜನ್ ಬಾಂಬಿನ ತಾಪ.

ಅಣುನಾಯಿ—ಅಣುಬಾಂಬು ತಯಾರಿಯ ತಂತ್ರವನ್ನು ಪರರಾಷ್ಟ್ರಗಳಿಗೆ ತಿಳಿಸುವ ದ್ರೋಹಿ.

ಅತ್ತಲಗಿಡ—ಅತ್ತಲಗಿಡ ಮದ್ದು ; ಹಿತ್ತಲಗಿಡ ಮದ್ದಲ್ಲ.

ಅತಿಗಂಡ—ವಿಟ.

ಅತಿಥಿ—ತನ್ನ ಮನೆಯಲ್ಲಿದ್ದಂತೆಯೇ ತೋರಹತ್ತಿದರೆ, ಅತಿಥಿ ತಾನಾಗಿಯೇ ಹೊರಟುಹೋಗುವನು.

ಅತಿಯಾಸೆ—ನಮಗಿಂತ ಹೆಚ್ಚು ಲಾಭ ಗಳಿಸಲು ಪ್ರಯತ್ನಪಡುವವರ ದುರ್ಗುಣ.

ಅತಿಶಯೋಕ್ತಿ—ಹಲವರು ಸತ್ಯವನ್ನು ನುಡಿಯುವ ರೀತಿ; ನಮ್ಮ ಸಾಹಸಗಳನ್ನು ಇತರರೆದುರು ವಿವರಿಸುವಾಗ ಸ್ವಾಭಾವಿಕವಾಗಿ ಬೆರೆಯುವ ಉಪ್ಪು-ಖಾರ.

ಅತೀದುರ್ಲಭ—ಕಾಳಿದಾಸ ಕಾವ್ಯ ಬರೆಯುವಾಗ ಕೈಲಿ ಹಿಡಿದಿದ್ದ ಫೌಂಟನ್‌ಪೆನ್.

ಅತ್ತ ಅತ್ತ ಬಾವಿ, ಇತ್ತ ಕೆರೆ– ಆದರೂ, ಉತ್ತು ಬೆಳೆಯುವವರೇ ಇಲ್ಲ (ಗಾದ).

ಅತ್ತರ್ ಈ ಸುವಾಸನೆಯ ದ್ರಾವಕಕ್ಕಾಗಿ ಮೊಗಲಾಯಿ ರಾಜಕುವರಿಯರು ಹಿಂದೆ ಬಹುವಾಗಿ ಅತ್ತರಂತೆ.

ಅತ್ತೆ–ಈಕೆಗೆ ಮೀಸೆ ಬಂದರೆ, ಚಿಕ್ಕಪ್ಪ. ಎಂದು ಕರೆಯಬಹುದು–ಮರೆಯಲ್ಲಿ.

ಅಂತಃಕರಣ– ಅಂತಕರಣವಿದ್ದರೂ ಅಂತಃಕರಣವಿರುವುದಿಲ್ಲ, ಅನೇಕರಿಗೆ.

ಅಂತರಾತ್ಮ ಮಾನಸಿಕ ಅಜೀರ್ಣಕಾರಿ.

ಅರ್ಥಕೋಶ—ಕ್ಲಿಷ್ಟಪದಾರ್ಥಗಳಿಗೆ ಕ್ಲಿಷ್ಟತರವಾದ ಅರ್ಥಗಳನ್ನು ಕೊಟ್ಟು, ವಾಚಕರನ್ನು ಕಂಗೆಡಿಸುವ ವಿಧಾನ; ಅಶ್ಲೀಲ ಪದಗಳನ್ನು ಒಂದೂ ಬಿಡದೆ ಉಪಯೋಗಿಸುವ ಏಕಮಾತ್ರ ಗ್ರಂಥ : ಇದೊಂದು ಗ್ರಂಥ ಇದ್ದರೆ ಸಾಕು ನಮ್ಮ ಬಳಿ. ಎಲ್ಲ ಕಾವ್ಯಗಳ ಎಲ್ಲ ಶಾಸ್ತ್ರಗಳ ಮಾತುಗಳೂ ನಮ್ಮ ಕೈಯಲ್ಲಿದ್ದ ಹಾಗೆಯೇ.

ಅರ್ಥಶಾಸ್ತ್ರ—ಇದನ್ನು ಹೇಳಿಕೊಟ್ಟು ಕೆಲವರು ಅರ್ಥಗಳಿಸುತ್ತಾರೆ.

ಅದೃಷ್ಟ– ನಮಗೆ ಅಪಜಯವೂ, ಇತರರಿಗೆ ಜಯವೂ ಲಭಿಸುವುದು.

ಕೇವಲ ಅದೃಷ್ಟದ ಪ್ರಭಾವದಿಂದಲೇ.

ಅಧ್ಯಕ್ಷರ—ಅಧ್ಯಕ್ಷರ ದೀರ್ಘವಿದ್ದರೆ, ನಕಾರಕ್ಕೆ ದ್ವಿತ್ವವಿಲ್ಲವೆನ್ನುತ್ತಾರೆ, ವೈಯಾಕರಣರು.

ಅಧಃಪತನ—ಅಧಿಕಾರ ಸ್ವೀಕಾರಾನಂತರ.

ಅರ್ಧಚಂದ್ರ—ಅನೇಕವೇಳೆ, ಇದು ಸಿಕ್ಕರೆ, ಎಷ್ಟೋ ಪುಣ್ಯ ಎಂದುಕೊಳ್ಳಬೇಕು.

ಅಧಿಕ—ಅಧಿಕಸ್ಯ ಅನೃತಂ ವಿಷಂ (ಸುಭಾಷಿತ); ಏಕೆಂದರೆ, ಹೇಳಿದ ಸುಳ್ಳುಗಳನ್ನೆಲ್ಲ ಜ್ಞಾಪಕದಲ್ಲಿರಿಸಿಕೊಂಡು, ಅವಕ್ಕೆ ತಕ್ಕಂತೆ ನುಡಿಯುತ್ತ ಹೋಗುವುದು ಬಹಳ ಕಷ್ಟದ ಕೆಲಸ.

ಅಧಿಕಪ್ರಸಂಗಿ—ರಾಜಕೀಯ ಅಖಾಡಾಗಳಲ್ಲಿ 'ಪ್ರಸಂಗ'ಗಳಿಂದಲೇ ಪ್ರಭಾವ ಬೀರಲು ಯತ್ನಿಸುವವ.

ಅಧೋಗತಿ—ಅತಿಯಾಸೆಯ ತುತ್ತ ತುದಿ.

ಅಧ್ಯಾಪಕ—ಶಾಲೆ ಎಂಬ ಗೊಂಡಾರಣ್ಯದಲ್ಲಿ ರೋದನ ಮಾಡುವವ.

ಅರ್ಧಾಂಗಿ—ಈಕೆ ಬಂದಳೆಂದರೆ ಅನೇಕರಿಗೆ ಇಷ್ಟೇ ಮೈಗಾವಲು.

ಅನರ್ಥಕೋಶ—ಜೋಕಾಚಾರ್ಯರೂ ಟೀಕಾಚಾರ್ಯರೂ ಸೇರಿ ರಚಿಸುವ ಗ್ರಂಥ.

ಅನರ್ಥಶಾಸ್ತ್ರ—ಯುದ್ಧಶಾಸ್ತ್ರ.

ಅನ್ನಪೂರ್ಣ—ಕೃತಕ ಅಕ್ಕಿಯಿಂದ ಮಾಡಿದ ಆಹಾರ.

ಅನಂತಂ - "ಅನಂತಂ ಅಜೇಯಂ ಕರ್ನಾಟಬಲಂ".

ಅನಾಚಾರ—ಅಲ್ಪಸಂಖ್ಯಾತರ ಆಚಾರ; ಸಾವಿರ ಅನಾಚಾರಗಳು ಸೇರಿದರೆ, ಅವೆಲ್ಲ ನಾಶ.

ಅನಾಥಾಲಯ—ಅನೇಕರು ತಮ್ಮ ಮಕ್ಕಳನ್ನೇ ಈ ಸಂಸ್ಥೆಗೆ ಧಾರೆ ಎರೆದು ಅದನ್ನು ನೆಲೆಗೊಳಿಸುತ್ತಾರೆ.

ಅನಾಮಧೇಯ—ಕೇವಲ ಒಂದು ಅಂಕಿಯಿಂದ ಮಾತ್ರ ಗುರುತಿಸಲ್ಪಡುವ ನೌಕರ; ನಮಗೆ ಸಾಲಕೊಟ್ಟಿರುವವ, ಅವನ ಹೆಸರನ್ನು ನಾವು ಮರೆತುಬಿಡುವುದರಿಂದ.

ಅನಾಮದೇಹ—ನಾಮ ಬಳಿಯದ ಶ್ರೀವೈಷ್ಣವ ದೇಹ.

ಅನಾರ್ಯಪುತ್ರ—ಪರಪುರುಷರನ್ನು ಪ್ರಾಚೀನ ಭಾರತದ ಮಹಿಳಾಮಣಿಗಳು ಸಂಬೋಧಿಸುತ್ತಿದ್ದ ರೀತಿ.

ಅನಾವರಣ—ದೊಡ್ಡವರ ರೂಪವನ್ನು ಚೌಕಟ್ಟಿನೊಳಗೆ ಹಾಕಿ, ಗೋಡೆ ಗೊರಗಿಸಿ, ಮೊಳೆ ಹೊಡೆದು, ಮುಸುಕು ತೆಗೆದು, ಬಹಿರಂಗಪಡಿಸುವ ಪ್ರಕರಣ.

ಅನಾಹುತ—ಎದುರುಪಕ್ಷದ ಉಮೇದುವಾರ ಚುನಾವಣೆಯಲ್ಲಿ ಗೆದ್ದಾಗ; ಅನಿರೀಕ್ಷಿತವಾಗಿ ನಮಗೆ ಅಥವಾ ನಮ್ಮವರಿಗಾಗುವ ನಷ್ಟ; ನಮಗಾಗದವರಿಗಾಗುವ ಲಾಭ.

ಅನ್ನಾಹುತ—ಬೆಂದು ಮಿಡ್ಡೆಯಾಗಿ ತಿನ್ನಲಾಗದಾದಾಗ.

ಅನಿಷ್ಟಪಕ್ಷ—ಬಲವಂತವಾಗಿ ನಾವು ಮಾಡಬೇಕಾದ ಕರ್ತವ್ಯ. ಕಾರ್ಯ.

ಅನೀತಿ—ಆಯಾ ಕಾಲಕ್ಕೆ ಹೊಸದೆನಿಸುವ ನಡತೆ.

ಅನೀಮಿಯ—ಹಿಂದೆ ಈ ಖಾಯಿಲೆಗೆ ನಾವು ಕುರುಬನ ಕುತ್ತ ಎನ್ನುತ್ತಿದ್ದೆವು. ಆದರೆ, ಆಗಲೂ ಇದಕ್ಕೆ ಈಗಿನ ಚಿಕಿತ್ಸೆಯೇ: "ಕುರುಬನ ಕುತ್ತಕ್ಕೆ ಕುರಿಯ ಪಿತ್ತವೇ ಮದ್ದು" (ಗಾದೆ).

ಅನುಕರಣ—ಕರೀ ದೊರೆಗಳ ದಾರಿ; ಗಂಡಹೆಂಡಿರ ಜಗಳದಲ್ಲಿ ಮಕ್ಕಳೂ ಜಗಳ ಕಲಿತುವು (ಗಾದೆ); ಕೀಸ್ತ್ರೀಯರನ್ನು ನೋಡಿ.

ಅನುಕಾರಣ—ಒಂದು ಕಾರಿನ ಹಿಂದೆ ಮತ್ತೊಂದು ಕಾರು ಹೋಗುವಿಕೆ.

ಅನುಕೂಲಸಿಂಧು—ನಮ್ಮ ಇಷ್ಟಾನುಸಾರ ವರ್ತಿಸಲು ಈ ಶಾಸ್ತ್ರದಲ್ಲಿ ಪಂಕ್ತಿ ಲಭಿಸುವುದು.

ಅನುನಾಯಿ—ನಾಯಕನ ಹಿಂದಿನ ಬಾಲ; ಆಳಿಯನ ಕೂಡ ಹಲ್ಕಿರಿವ ಗೆಳೆಯ: ಅನುನಾಯಿ ಬೊಗಳಿದರೆ, ಅಧಿಕಾರ ಸಿಕ್ಕೀತೆ? (ಗಾದೆ; ಮಹಾಭಾರತದ ಸ್ವರ್ಗಾರೋಹಣಪರ್ವವನ್ನೋದಿದಮೇಲೂ, ನಾಯಿ ಸಾಕುತ್ತ, ಅದರ ಮೇಲೆ ಕರುಣೆ ತೋರಿಸುವವ.

ಅನುಯಾಯಿ—ಇನ್ನೂ ಏನೇನೋ ಪಡೆಯಬಹುದೆಂಬ ಭರವಸೆಯನ್ನುಳಿಸಿಕೊಂಡಿರುವ ಕಂಗಾಲ.

ಅನುರೋಧಿಸುವುದು—ಗುಂಪಿನಲ್ಲಿ ಗೋಳೋ ಎಂಬುವುದು.

ಅನುಶೂಲ—ಅನುಕೂಲಮಾಡಿಕೊಡುವ ನೆಪದಲ್ಲಿ ಕೆಲಸ ಕೆಡಿಸುವ ವಿಧಾನ.

ಅನುಸರಣ—ಸಮಯದಲ್ಲಿ ಕೈಕೊಡುವ ಏರ್ಪಾಟು.

ಅನೃತ—ಮಾನವನ ಅಮೃತ; ಸಂಕಟ ಬಂದರೆ ಸುಳ್ಳೇ ಗತಿ (ಗಾದೆ; ತಮ್ಮ ಬಾಯಿಂದ ಎಲ್ಲಿ ಅನೃತ ಹೊರಬೀಳುವುದೋ ಎಂಬ ಹೆದರಿಕೆಯಿಂದ ಅನೇಕರು ಕೇವಲ ಮೂಗಿನಿಂದಲೇ ಮಾತನಾಡುತ್ತಿರುವುದನ್ನು ನಾವು ಗಮನಿಸಬಹುದು.

ಅನ್ನ—ಅನ್ನ ಮೂಲಂ ಬಲಂ ಪುಂಸಾಂ; ಆದರೆ, ಸ್ತ್ರೀಯರಿಗೆ ?............ 'ಅನ್ನಾತುರಾಣಾಂ ನ ಮತಂ ನ ಜಾತೀ'. ಅನ್ನವಿದ್ದಾಗಲೆ ತನ್ನನ್ನಾ ತೋಂ, ಇನ್ನು ಅನ್ನವಿಲ್ಲದಿದ್ದರೆ, ತಾಳ ಕೇಳಬೇಕೆ ?

ಅನ್ನಾವಟ್ಟಿಗಾರ—ಉಂಡಾಡಿಭಟ್ಟ.

ಅಪ್—ಆಂ ಭಕ್ತರ್‌ದೇಹಿಕದೇಹನ್ ಅಪ್ಪಪ್ಪಪ್ಪೆನ್, ಇದು ಸಂದೇಹಮೆ?— ಎಂಬ ಉಕ್ತಿಯನ್ನು ಗಮನಿಸಿ; ಅಪ್ಪರ್ ಎಂಬ ಅರವ ಮನಿಗಳೊಬ್ಬ ರನ್ನೂ ನೆನೆಯಿರಿ.

ಅಪಮಾನ—ತೆಳುವಾದ ಚರ್ಮ ಇರುವವರಿಗೆ ತಗಲುವ ಒಂದು ರೀತಿಯ ವ್ಯಾಧಿ; 'ಅಪಮಾನದಿಂದಲಿ ತಪವೃದ್ಧಿಯಾಗೋದು'.

ಅಪರಕ್ರಿಯೆ—ಇದಕ್ಕಾಗಿ ಖರ್ಚುಮಾಡುವ ಹಣದಿಂದ, ದುಃಖ ಹೆಚ್ಚಾಗು ತ್ತದೇ ವಿನಃ ಕಡಿಮೆಯಾಗದು.

ಅಪರಂಗಿ—ಪರಂಗಿಯವರ ನಾಗರಿಕತೆಗೆ ವಿರೋಧವಾದ ನಡೆ, ನುಡಿ.

ಅಪರಾಧಿ—ಸಿಕ್ಕಿಬಿದ್ದ ಠಕ್ಕ.

ಅಪರೂಪ—ಒಂದು ತರುಣದಲ್ಲಿ ಎಲ್ಲ ರೂಪೂ, ಅಪರೂಪ; ಆದ್ದರಿಂ ದಲೇ. ಲೋಕದಲ್ಲಿ ಮದುವೆಗಳಾಗುವುದು.

ಅಪಶಕುನ—ಯಾರಾದರೂ ನಮ್ಮ ಮೂಗು ಮುರಿದರೆ, ನಾವು ಅವರಿಗೆ ಇದನ್ನು ಒಡ್ಡಬಹುದು.

ಅಪುತ್ರ- ಹೇಸರುಕತ್ತೆ; ಅಪುತ್ರಸ್ಯ ಗತಿರ್ನಾಸ್ತಿ, ಎಂಬ ಶಾಸ್ತ್ರೋಕ್ತಿಯನ್ನನು ಸರಿಸಿ, ಆ ಪ್ರಾಣಿ ಮುಂದಕ್ಕೆ ಅಡಿಯಿಡಲು ತುಂಬ ತಂಟೆಮಾಡುತ್ತದೆ.

ಅಪ್ಪಚ್ಚಿ-ಶಿಶುಸಾಹಿತ್ಯದ ಮೊದಲ ಮಾತುಗಳಲ್ಲೊಂದು. ಇದನ್ನು ಮಾಡಿ ಬಿಡುತ್ತೇನೆ ಎಂದರೆ ಶಿಶುಗಳು ಹೆದರುವುದೂ ಉಂಟು.

ಅಪ್ಪಕ್ರಿಯೆ—ಮೇಲುಲೋಕವನ್ನು ಸಾಧಿಸಲು ಮಾಡಬೇಕಾದ ಕ್ರಿಯೆ.

ಅಪ್ಪವರ್ಣಂ—ಅಪ್ಪನ ಬಣ್ಣ; ದೇಶಿಯೊಳ್ ಉದ್ಧವಂ.
ಅಪ್ಪರ್—ತಮಿಳು ದೇಶದಲ್ಲಿ ಮೇಲೆನಿಸಿದವರೊಬ್ಬರು.
ಅಪ್ರಯೋಜಕತನ—ಶ್ರೀಮಂತರ ಮಕ್ಕಳು ಇದಕ್ಕೇ ತಯಾರಾಗ್ತಾರೆ.
ಅಪ್ಯಾಯಮಾನ—ಚಾಕರಿ ನೌಕರಿಗಳಲ್ಲಿ ಮೇಲಿನ ಗ್ರೇಡು ದೊರೆತಿದೆ ಎಂಬ ಸುದ್ದಿ.
ಅಂಪೈರು—ಆಟ ಮುಗಿಯುತ್ತಲೂ ಬಯಲಿಂದ ಮೊದಲು ಓಟಕೀಳುವವ ಈತನೇ.
ಅಬಲೆ— ಮಾನವಕುಲ ಮೊದಲಾದಾಗಿನಿಂದ ತಪ್ಪೆಂದು ತಿಳಿದೂ ತಿಳಿದೂ ಪುರುಷರು ಪ್ರಚಾರಮಾಡುತ್ತ ಬಂದಿರುವ ಒಂದು ಸುಳ್ಳು.
ಅಬ್ರಹ್ಮಣ್ಯಂ—ಬ್ರಾಹ್ಮಣರ ಕೂಗು.
ಅಭಯಭಾಷಾಪ್ರವೀಣ—ಮಂತ್ರಿ; ಜನನಾಯಕ; ವೈದ್ಯ.
ಅಭಯಸಂಕಟ—ಅಭಯಕೋರುತ್ತ ನಮ್ಮಲ್ಲಿಗೆ ಓಡಿಬರುವವರನ್ನು ಹೇಗೆ ಕಾಪಾಡುವುದು, ಎಂಬ ಚಿಂತೆ.
ಅಭಿನವ—ಕಾಳಿದಾಸಾದಿ ಮಹಾಕವಿಗಳ ಕೃತಿಗಳನ್ನು ಭಾಷಾಂತರ, ರೂಪಾಂತರ ಇತ್ಯಾದಿ ಮಾಡಿ ಪರಿವರ್ತಿಸುವುದರಿಂದ ಬರುವ ಬಿರುದು : ಅಭಿನವಭಾಸ, ಅಭಿನವ ವಾಲ್ಮೀಕಿ ಇತ್ಯಾದಿ ನೋಡಿ.
ಅಭಿಪ್ರಾಯ—ಪ್ರಾಯಕ್ಕೆ ಅನುಗುಣವಾಗಿ ಮಾರ್ಪಾಟು ಹೊಂದುತ್ತ ಹೋಗುವ ನಮ್ಮ ಅಭಿರುಚಿ, ಅಭಿಮತ ಇತ್ಯಾದಿ.
ಅಮಲುದಾರ—ಅಮಲುಹತ್ತಿದವ.
ಅಮೃತ—ಕಾಲಕೂಟವನ್ನು ನುಂಗಿದ ಬಳಿಕ ಸಿಗುವ ಒಂದು ಪ್ರಿಯವಸ್ತು.
ಅಮೇರಿಕಾದವರು– ತಮ್ಮಲ್ಲಿರುವ ಕಪ್ಪು ಜನರನ್ನುದ್ಧರಿಸಲಾರದೆ, ಉಳಿದವರನ್ನೆಲ್ಲ ಉದ್ಧರಿಸಲು ಹೊರಟಿರುವ ಉದ್ಧಟರು.
ಅಮೋಘಚಿತ್ರಗಳು—ಎಲ್ಲ ವಾಕ್ಚಿತ್ರಗಳೂ.
ಅಮ್ಮನಚೇಷ್ಟೆ— ಹಾಹಾಕಾರ, ಯದ್ವಾತದ್ವಾ.
ಅಮ್ಮಾವರಗಂಡ—ತನ್ನ ಸತಿಯನ್ನೇ ಪ್ರೇಮದಿಂದ ಮುದ್ದಿಸುವ ಪತಿ.
ಅಮ್ಮಾವರು—ಮನೆ ಯಜಮಾನರು.
ಅಯೋಗ್ಯ—ನಾವು ಬಯಸುವ ಹುದ್ದೆಗೆ ಸ್ಪರ್ಧೆ ಪೋಟಿಮಾಡುವವ.

ಅಯ್ಯ—ಹೀಗೆಂದರೆ, ಸ್ವರ್ಗ—ಅನ್ನಿಸಿಕೊಂಡವನಿಗೆ.
ಅಯ್ಯೋ—ಅಯ್ಯೋ ಎಂದರೆ ಆಯುಷ್ಯ ಕಡಿಮೆಯಾಗುವುದಂತೆ, ಆದ್ದರಿಂದ, ಯಾರನ್ನು ನೋಡಿಯೂ ಕರುಬಬಾರದು ಎಂಬುದು ಸ್ಪಷ್ಟ, ಕೆಲವರು ಹಾಡುವುದನ್ನು ಕೇಳುತ್ತ ಕೇಳುತ್ತ ನಾವು ಹೀಗೆಂದು ಬಿಡುತ್ತೇವೆ ; ಅದು ಶುದ್ಧ ತಪ್ಪು. ಆತನ ಆಯುಸ್ಸಿಗೆ ಅಪಾಯ.
ಅರಚುವಿಕೆ—ಕತ್ತೆಯ ಬಹಿರಂಗ ಭಾಷಣ; ಲೌಡ್ ಸ್ಪೀಕರುಗಳ ಠೀವಿ.
ಅರಸಂ—ಬರಬರುತ್ತ ಶುಷ್ಕವಾಗಿ ಶಕ್ತಿಹೀನವಾಗುತ್ತಿರುವ ಸ್ಥಿತಿ.
ಅರಿಯೆ—ಅರಿಯೆನು ಎಂದರೆ, ಅರವತ್ತುಗುಣ (ಸಾಕ್ಷಿ ನುಡಿಯುವಾಗ) ; ಕಾಣೆನು ಎಂದರೆ ಕೋಟಿ ಗುಣ.
ಅರಿಷಡ್ವರ್ಗ—ಒಂದು ಮೊಲಕ್ಕೆ ಆರು ಹುಲಿ.
ಅರೆಮನೆಗಳು—ಮಧ್ಯಮವರ್ಗದವರ ವಾಸಗೃಹಗಳು.
ಅರೆಹೊಟ್ಟೆಗೆ—ಆಧುನಿಕ ಅರವಟ್ಟಿಗೆ ಅರ್ಥಾತ್, ಹೋಟಲು.
ಅಲ್ಲಪ್ಪ—ಅಲ್ಲಪ್ಪನ ಚಾವಡಿಯಲ್ಲಿ ಅಲ್ಲಪ್ಪ ಎನ್ನಲೇಬೇಕು. ಅದೇ ಜ್ಞಾಣರ ಲಕ್ಷಣ.
ಅಲಾರಂಗಡಿಯಾರ—"ಎಚ್ಚರೆಚ್ಚರು, ಮಾರ", ಎಂದು ಘಂಟಾಘೋಷ ಮಾಡಿ ಬೊಬ್ಬೆ ಎಬ್ಬಿಸುವ ದ್ರೋಹಿ; ಕೂಸು.
ಅಲ್ಪ—ಅಲ್ಪನಿಗೆ ಅರ್ಥ ಸಿಕ್ಕರೆ, ಅರೆನಿಮಿಷದಲ್ಲಿ ಕಳೆದುಕೊಂಡು ಬಿಡುತ್ತಾನೆ (ಗಾದೆ).
ಅಲ್ಪಪ್ರಾಣ—ರೇಷನ್ ಯುಗದ ಭಾರತೀಯ; ಹಳಗನ್ನಡದಲ್ಲಿ ಎಲ್ಲ ಅಲ್ಪಪ್ರಾಣಗಳೇ.
ಅಲ್ಪವಿದ್ಯಾ—"ಅಲ್ಪವಿದ್ಯಾ ಮಹಾಸುರ್ವಿ" ; ಆದ್ದರಿಂದಲೇ ಮಹಾನಾಗಲು ಅಲ್ಪವಿದ್ಯೆಯೇ ಉತ್ತಮ.
ಅಲ್ಪವಿರಾಮ—ಗೆಳೆಯರು ಬಹಳ ಇದ್ದವನ ಗೋಳು.
ಅಲ್ಪವೃಕ್ಷ—ಕೊಂಚ ಮಾತ್ರ ಚಂದಾ ಹಣವನ್ನು ಕೊಡಲೊಪ್ಪುವ ಶ್ರೀಮಂತ.
ಅಲ್ಲೋಪತಿ—ಇಲ್ಲೋ ಅಲ್ಲೋ ಎಲ್ಲೋ ಎಂದು ರೋಗಿಯ ವಿಷಯವಾಗಿ ನಂಟರು ಪರದಾಡಹತ್ತಿದಾಗ, ಅಲ್ಲೋಪತಿಯೇ ಗತಿ.

ಅಲಂಕಾರ—ಡಾರ್ವಿನ್ ಹೇಳಿಕೆಯನ್ನು ಕೇಳುವ ಮುನ್ನವೇ ಕನ್ನಡಿಯ ಹೇಳಿಕೆಯಿಂದ ತಾವು ಕಪಿಸಂತತಿ ಎಂದು ಪತ್ತೆ ಹಚ್ಚಿಕೊಂಡ ಸ್ತ್ರೀ-ಪುರುಷರು ಅದನ್ನು ಮರೆಮಾಚಲು ಅನುಸರಿಸುವ ಆತ್ಮವಂಚನೆಯ ವೈಖರಿ.

ಅವತಾರ—ನಮ್ಮ ಶತ್ರುಗಳನ್ನು ಸೆದೆಬಡಿಯಲು ನಾವೂ ತೆಗೆದುಕೊಳ್ಳಬೇಕಾದ ವೇಷವಿಶೇಷಗಳು.

ಅವಶ್ಯಕಪದಾರ್ಥ—ನಮ್ಮ ನೆರೆಮನೆಯವರು ಕೊಂಡು ಮೆರೆದು ಮೂದಲಿಸುವ ಪದಾರ್ಥ.

ಅವಿವೇಕಿಗಳು—ನಮ್ಮ ಹೆಣ್ಣುಮಕ್ಕಳನ್ನು ಮದುವೆಯಾಗುವುದಿಲ್ಲವೆಂದು ಹೇಳುವ ಯುವಕರು.

ಅಶರೀರಿ—ರೇಷನ್ ಕಾಲದ ನರಮನುಷ್ಯ.

ಅಶ್ವಗಂಧಿ—ಕುದುರೆ ಜೂಜುಗಳಲ್ಲೇ ಸದಾ ನಿರತನಾಗಿರುವ ಒಂದು ಬಗೆಯ ಮನುಷ್ಯ.

ಅಶ್ವಮೇಧ—ಇದನ್ನು ಈಗ ಜಟಕಾದವರೂ ಟಾಂಗಾದವರೂ ಸಾಂಗವಾಗಿ ನೆರವೇರಿಸುತ್ತಿರುವರು.

ಅಶ್ವಶಕ್ತಿ—ಎರಡೂವರೆ ಸೇರು ಹುರುಳಿ.

ಅಶ್ವಲಾಯನ—ಜೂಜು ಕುದುರೆಗಳ ತಬೇಲಿಗಳ ಸುತ್ತ ಠಲಾಯಿಸುತ್ತ, ಗೆದ್ದ ಕುದುರೆಗಳ ಲದ್ದಿ ಮೂಸುತ್ತ ಕಾಲ ಕಳೆಯುವ ವಿಲಾಸಿ.

ಅಶ್ವಾಮಿತ್ರಸೃಷ್ಟಿ—ಹೇಸರುಕತ್ತೆ.

ಅಶ್ಲೀಲ—ಗ್ರಂಥರಚನೆ ಮಾಡುವಾಗ, ತದ್‌ಕರ್ತರು ತಮ್ಮ ದ್ರಾಕ್ಷಾಪಾಕಕ್ಕೆ ಬೆರೆಸುವ ಒಂದು ಮಾದಕ ವಸ್ತು.

ಅಶ್ರುತಗಾನ—ಶ್ರುತಗಾನಕ್ಕಿಂತ ಮಧುರತರವೆನಿಸುತ್ತದೆ, ಕೆಲವರ ಹಾಡು ಕೇಳುವಾಗ.

ಅಷ್ಟಾವಕ್ರ—ಕೆಲವರ ಬುದ್ಧಿಯಲ್ಲಿ ಕಾಣಬರುವ ಡೊಂಕು; ನಾಟ್ಯಪ್ರವೀಣನ ಗುಣವಿಶೇಷ; ಎರಡನೆಯ ತರಗತಿಯ ಡಬ್ಬಿಯಲ್ಲೇ ನೂರಾರು ಮೈಲಿ ಪ್ರಯಾಣಮಾಡಿದವನ ಅಂಗರಚನೆ.

ಅಷ್ಟಾವಧಾನಿ—ಎಂಟು ಸುಳ್ಳುಗಳನ್ನು ಹೇಳಿ ಯಾವುದು ಪತ್ತೆಯಾಗದಂತೆ ಜೀವನ ನಡೆಸಬಲ್ಲವ.

ಅಸಫ್‌ಜಾಳ—ಅನ್ಯಾಯದಲ್ಲಿ ಗಳಿಸಿದ ಹಣ ಅಸಫ್‌ಜಾಳದಲ್ಲಿ ಹೋಯಿತು (ಗಾದೆ).

ಅಸಭ್ಯ—ನಮಗಾಗದವರ ವರ್ತನೆ.

ಅಸಮಂಜ—ಕಂಡವರ ಮಕ್ಕಳನ್ನು ಹಳ್ಳಕ್ಕೆ ತಳ್ಳಿ ಆಳ ನೋಡುವವ.

ಅಸಹ್ಯ—ನೆರೆಮನೆ ಮಕ್ಕಳು: ಅಸಹ್ಯಮಸುಭೋಕ್ತವ್ಯಂ (ಸುಭಾಷಿತ).

ಅಸಹಾಯಶೂರ— ಮದುಮಣಿಗ.

ಅಸಹ್ಯಾದ್ರಿ—ಕಸದಗುಡ್ಡೆ: ಏರಲು ತ್ರಾಸಕೊಡುವ ಬೆಟ್ಟ.

ಅಸ್ತ್ರಲಾಘವ—ತೂಕ ಹೆಚ್ಚಾದಾಗ.

ಅಸ್ತವ್ಯಸ್ತ—ಕೋರ್ಟುಗಳಲ್ಲಿ ವ್ಯವಹಾರ ಹೂಡಿ, ಗೆದ್ದವನ ಹಾಗೂ ಸೋತವನ ಪಾಡು.

ಅಸ್ಥಿಭಾರ—ಸಾಮ್ರಾಜ್ಯಗಳ ತಳಹದಿ.

ಅಸುರ—ಸುರಾಪಾನ ಮಾಡದವನು "ಅಪ್ರತಿಗ್ರಹಣಾತ್ತಸ್ಯಾದೈತೇ ಯಾಶ್ಚಾಸುರಾಸ್ತಥಾ".

ಅಸೂಯೆ—ಒಬ್ಬ ನೌಕರನಿಗೂ ಮತ್ತೊಬ್ಬ ನೌಕರನಿಗೂ ಇರುವ ಸಂಬಂಧ ಸೂಚಕ ಪದ, ಬಡವನಿಗೆ ಬಡವನನ್ನು ಕಂಡರೂ ಅಸೂಯೆಯಾಗುವುದು ಆಶ್ಚರ್ಯ.

ಅಹೋದರಿ—ಆಳವಾದ ದರಿಯನ್ನು ಕಂಡಾಗ. ಪಂಡಿತರು ಹೇಳುವ ಮಾತು.

ಅಹೋರಾತ್ರಿ—ರಾತ್ರಿ ಬಹಳ ರಮಣೀಯವಾಗಿದ್ದರೆ. ಅಥವಾ, ಇಲ್ಲದಿದ್ದರೂ, ಕವಿಗಳು ಅಹೋರಾತ್ರಿ, ಎಂದು ಹಲುಬುವುದುಂಟು.

ಅಹಂಕಾರ—ತನಗೆ ಅರ್ಥವಾಗದ್ದೆಲ್ಲ ತಪ್ಪು ಎಂಬ ಭಾವನೆಯನ್ನುಂಟುಮಾಡುವ ಮನೋವಿಕಾರ; ತನ್ನ ಮೂಗೊಂದೇ ನೇರ, ಎಂಬ ಭ್ರಾಂತಿ.

ಅಹೂಂಕಾರ—ಅಹಂಕಾರಪ್ರಚೋದಿತ ಮೂದಲಿಕೆಯ ನಾದ.

ಅಳತೆ— ವ್ಯಾಪಾರಗಾರರು ಕಲಿತಿರುವ ಒಂದು ಬಗೆಯ ಇಂದ್ರಜಾಲ.

ಅಳಲೆಕಾಯಿ—ಅನೇಕರಿಗೆ ಪಾಂಡಿತ್ಯವನ್ನೊದಗಿಸಿಕೊಟ್ಟಿರುವ ಫಲ.

ಅಳಿಯ—ಅಳಿಯ ಹಳ್ಳಕ್ಕೆ ಬಿದ್ದರೆ, ಆಳಿಗೊಂದು ಉಡುಗೊರೆ(ಗಾದೆ)ಅಳಿಯ, ನಿನ್ನ ಗತಿ, ಮನೆ ತೊಳೆಯುವುದೇ (ಗಾದೆ), ತುಂಬ ಖಾಯಿಷ್ಟನವಿ, ಖೂಳ! ಗದುಕು (ಆಶೀರ್ವಚನ)

ಅಳಿಲುಸೇವೆ—ಮಣ್ಣು ಹೊರುವ ಕೆಲಸ.

ಅಳು – ಏಕೆ ಹುಟ್ಟಿಸಿದೆ ಅಣುಬಾಂಬುಯುಗದಲ್ಲಿ, ಎಂದು ಹುಟ್ಟಿದ ಕೂಡಲೇ ಮಾನವ ಶಿಶು ಮಾಡುವ ರೋಧನ; ಎಲ್ಲ ವಯಸ್ಸಿನ ಮಕ್ಕಳೂ ಇದರ ನೆರವಿನಿಂದಲೇ ಆಹಾರಪಾನೀಯಗಳನ್ನು ದಕ್ಕಿಸಿಕೊಳ್ಳುತ್ತಿರುವುದು.

ಅಳೆದು – ಅಳೆದು ಹಾಕಿ, ಬಳಿದು ಉಣ್ಣಬೇಕು, ಈಗಿನ ಕಾಲದಲ್ಲಿ.

ಅಕ್ಷಿ ಶೀನು. ಏಕಾಕ್ಷಿ ಕುಲನಾಶನಂ. ಒಂಟಿಶೀನು ಅಮಂಗಳ.

ಆ

ಆ—ಹಲ್ಲು ವೈದ್ಯರ ಬೀಜಮಂತ್ರ; ಶಿಶುಸಾಹಿತ್ಯ ರೀತ್ಯಾ, ಹಾಲು ನೀರು ಮುಂತಾದ ದಾಹಪರಿಹಾರಕವಸ್ತುಗಳು.

ಆಕಳಿಕೆ– ಉಪನ್ಯಾಸ ಕೇಳುತ್ತ ಕುಳಿತಿರುವ ಆಕಳು, ಸಾಕು ನಿಲ್ಲಿಸು ಎಂದು ಸೂಚನೆ ಕೊಡುವ ರೀತಿ; ಮೊಮ್ಮಕ್ಕಳು ಅಜ್ಜಿಯರಿಗೆ ಕಲಿಸುವ ಒಂದು ವಿದ್ಯೆ; ಗೃಹಸ್ಥಾಶ್ರಮಗಳಲ್ಲಿ ಪತಿಗಳು ಬಾಯಿ ತೆರೆಯುವುದು ಆಕಳಿಕೆಗೆ ಮಾತ್ರ.

ಆಕಾಶ ಐದನೆಯ ಭೂತ; ಈಚೆಗೆ ಇದರ ಸಂಬಂಧವಾದ ಭಯವೇ ಹೆಚ್ಚು. ಅನೇಕರು ಆಕಾಶ ನೋಡುತ್ತ ನಡೆದು ಬಾವಿಗೆ ಬೀಳುತ್ತಾರೆ; ಅನೇಕರು ಆಕಾಶ ಕೇಳುತ್ತ ನಡೆದು ಆಕ್ರೋಶ ಹುಟ್ಟಿಸಿಕೊಳ್ಳುತ್ತಾರೆ. ಹಾಗೆ ನಡೆಯಿರಿ, ಕೇಳಿರಿ, ಎಂಬ ನೂಕುನೂಕಲು ಬಲು ಹೆಚ್ಚು.

ಆಕಾಶಪುರಾಣ– ರೇಡಿಯೋ ವಾರ್ತೆ.

ಆಗ್ನೇಯಾಸ್ತ್ರ—ಸುಡ ಮಾತು.

ಆಚಾರ—ಜನಮನದಲ್ಲಿ ಬೇರುಬಿಟ್ಟು ಬಿರುಕೆಬ್ಬಿಸಿರುವ ಹಳೆಯ ಮರ.

ಆಚ್ಛಾದನ– ಇದು ಎಷ್ಟು ಕಡಿಮೆ ಅಗತ್ಯ ಎಂಬುದನ್ನು ಪಾಶ್ಚಾತ್ಯರೂ, ಮಹಿಳೆಯರೂ, ಅನಾಗರಿಕರೂ ಪರೀಕ್ಷಿಸುತ್ತಿರುವರು.

ಆಟಿಗೆ—ವಿರಾಮ ಸಿಕ್ಕಿದಾಗ, ನಾವು ಆಡುವುದಕ್ಕಾಗಿ, ಮಕ್ಕಳ ಹೆಸರು ಹೇಳಿ, ನಾವು ಕೊಂಡು ತಂದು ಇರಿಸಿರುವ ಆಟದ ಸಾಮಾನುಗಳು.

ಆಡಳಿತ– ಮೂರ್ತಿ ಪೂಜೆಯ ವ್ಯವಸ್ಥೆ; ಇದನ್ನು ಮಾಡಲು ಎಲ್ಲರಿಗೂ ಆಸೆ.

ಆಡು— ಕಾಡಿನ ಶತ್ರು; ಆನೆ ಆ ದಾರಿಯಲ್ಲಿ ಹೋಯಿತು, ಅಂದ್ರೆ, ಆಡೂ ಆ ದಾರಿಯಲ್ಲಿ ಹೋಗಬಹುದು.

ಆಡುವುದು— ಆಡುವುದು ಕಡು ಸುಲಭವೆದ್ದು ಪ್ರೊನೀಡು ಗೈವುದೆ ಕಷ್ಟ (ಪ್ರ. ಸರಸ್ವತಿ).

ಆಣ—ಆಣೆ; ಕಾಸು. ಗುಣಂ ಆಣಂ ಇಲ್ಲ ಎನಲೊಡಂ ಏನುಂ ಇಲ್ಲೆಂಬ ಅರ್ಥಂ.

ಆಣೆ—ಬಹಳ ಅಗ್ಗವಾದ ಒಂದು ವಸ್ತು.

ಆತನು—ಆ ದೇಹ (ಮಲೆಯಾಳಿ ಭಾಷೆಯಲ್ಲಿ ಆದ್ದೇಹ = ಆತನು, ಇದ್ದೇಹ= ಈತನು).

ಆತ್ಮಕಥೆ—ಬೇರೆ ಯಾರಾದರೂ, ತಮಗಾಗದವರು ಬರೆದುಬಿಟ್ಟಾರು. ಎಂಬ ಭೀತಿಯಿಂದ ಬುದ್ಧಿವಂತರಾದ ದೊಡ್ಡವರನೇಕರು ತಮ್ಮ ಜೀವ ಚರಿತ್ರೆಯನ್ನು ತಾವೇ ತಯಾರಿಸಿ ತಿದ್ದಿಸಿ ಪ್ರಕಟಿಸಿಬಿಡುತ್ತಾರೆ.

ಆತ್ಮಘೋಷ— ಕಾಕ ಕಾಕ ಎಂದು ತನ್ನ ಹೆಸರನ್ನೇ ಹೇಳಿಕೊಂಡು ತಿರುಗುವ ಕಾಗೆ.

ಆತ್ಮಚಿಕಿತ್ಸೆ— ಕಾಯುದ ಕಳವಳ ಕಾಣೆನ್ ಎಂದಲ್ಲಿ ಹೋಯಿತು.

ಆತ್ಮಬಾಂಬು—ಇತರ ರಾಷ್ಟ್ರಗಳ ಕೈಯಲ್ಲಿ ಆಟಂಬಾಂಬಿರಲಿ, ನಮ್ಮ ಕೈಯಲ್ಲಿ ಆತ್ಮಬಾಂಬಿರುವತನಕ ನಾವೂ ಪರಂದಾಮವನ್ನೈದುತ್ತೇವೆ, ಸಂದೇಹವಿಲ್ಲ.

ಆತ್ಮವಿಚಾರ— ಆತ್ಮಸ್ತುತಿ.

ಆತ್ಮಹತ್ಯೆ— ಸಂಸಾರವೆಂಬ ಆಟಕ್ಕೆ, ಇದೇ ತುರುಫ್; ನೂರುಸಲ ಹೇಳ ಬಹುದು, ಆದರೆ, ಮಾಡಲು ಒಂದೇ ಸಲ ಮಾತ್ರ ಸಾಧ್ಯ; ಇದನ್ನು ಸಮರ್ಪಕವಾಗಿ ಮಾಡದೆ ಇದ್ದರೆ, ಸರ್ಕಾರದವರು ಹಿಡಿದು ಶಿಕ್ಷಿಸು ತ್ತಾರೆ; ಆದ್ದರಿಂದ ಇದು ಮಿಕ್ಕ ಕೆಲಸಗಿಲಸ ಚಾಕರಿನೌಕರಿಗಳ ಹಾಗಲ್ಲ.

ಆತಿಥ್ಯ— ಬಂದವನನ್ನು ಮರುದಿನವೇ ಮನೆಯಿಂದ ಹೊರಡಿಸುವ ಪಿತೂರಿ.

ಆತುರಗಾರ—ಆತುರಗಾರನ ಸುದ್ದಿ ಮಟ್ಟ (ಗಾದೆ) ವೃತ್ತಪತ್ರಿಕೆಗಳಿಗೆ ಬಾತ್ಮಿದಾರರು ಸುದ್ದಿ ಶೇಖರಿಸಿ ಕಳುಹಿಸುವಾಗ, ಆತುರಆತುರ ವಾಗಿರಬಾರದೆಂಬ ಎಚ್ಚರಿಕೆ.

ಆದೇಶತೆ—ಪರದೇಶಗಳಲ್ಲಿ ಹುಟ್ಟುವಿಕೆ.
ಆದೇವ—ಆದೇವ ಈದೇವ ಮಾದೇವನೆನಬೇಡ (ಸರ್ವಜ್ಞ).
ಆದಂ—ಮಾನವ ಜನಾಂಗದ ಮೂಲಪುರುಷನೀತನಾದಂ. ಆದಂ ಅಂದು ತಿಂದ ಸೇಬು ಇನ್ನೂ ಹಲವರ ಗಂಟಲಲ್ಲಿ ಸಿಕ್ಕಿಕೊಂಡು ಕಂಠಮಣಿಯಾಗಿ ಪ್ರಶೋಭಿಸುತ್ತಿದೆ.
ಆಧಾರ—ಆಧಾರಮಾಡುವುದೇ ಕಟ್ಟಕಡೆಯ ಆಧಾರ.
ಆನೆ ಸಂಗೀತ—ನಾಯಿಯ ಬೊಗಳು. "ಶ್ವಾನ ತಾ ಬೊಗಳುತಿರಲಾನೆಯದನೊಂದು ಗಾನವೆಂಬಂತೆ".
ಆನೆ ಹಾಲು—ಇದನ್ನು ಸೇವಿಸಿದರೆ ವಾರವೊಂದಕ್ಕೆ ಮೈಯಭಾರ ಇಪ್ಪತ್ತೈದು ಪೌಂಡಿನಂತೆ ಹೆಚ್ಚುತ್ತ ಹೋಗುವುದಂತೆ....ಆನೆ ಮರಿಗೆ.
ಆಪತ್‌ಸ್ತಂಭ—ಆಪತ್ತಿನಲ್ಲಿ ಹಿಡಿದುಕೊಳ್ಳಲನುಕೂಲಿಸುವ ಕಂಬ.
ಆಪರೇಷನ್—ಹಣದಿಂದ ನರಳುವ ಶ್ರೀಮಂತರಿಗೆ ಈ ಮೂಲಕ ವೈದ್ಯರು ಅದರ ಬಾಧೆಯನ್ನು ಕಡಿಮೆ ಮಾಡುತ್ತಾರೆ.
ಆಪಸ್ತಂಭ—ಬಿಕಿನಿ ಕಡಲಿನಲ್ಲಿ ಅಣುಬಾಂಬನ್ನು ಸಿಡಿಸಿದಾಗ ಮೇಲೆದ್ದ ನೀರು.
ಆಫೀಸ್—ಮನೆ ತಾಪತ್ರಯಗಳನ್ನೆಲ್ಲ ಮರೆತು ನೌಕರರು ನಿದ್ದೆ ಮಾಡುವ ಸ್ಥಳ.
ಆಭಾಸವಾಣಿ ಗಗನಪಿಶಾಚಿಗಳ ಕರ್ಕಶ ಗಾನ.
ಆರ್ಯರು—ಜರ್ಮನರೆಲ್ಲ ಆರ್ಯರು, ಉಳಿದವರಾರೂ ಆರ್ಯರಲ್ಲ ಎಂದು ಹಿಟ್ಲರ್ ಹೇಳಿದ ಮೇಲೆ, ನಾವೂ ಆರ್ಯರು ಎಂದು ಹೆಮ್ಮೆ ಪಡಲು ಒಬ್ಬರೂ ಒಪ್ಪುವುದಿಲ್ಲ.
ಆಯಾಸ—ಕೆಲಸ ಎಂಬ ಶಬ್ದವನ್ನು ಕೇಳುತ್ತಲೂ ಕೆಲವರಲ್ಲಾಗುವ ಪ್ರತಿಕ್ರಿಯೆ; ಸಿನಿಮಾ ಹಾಡುಗಳಿಂದ ಇದನ್ನು ಪರಿಹರಿಸಿಕೊಳ್ಳಬಹುದೆಂದು ಯುವಕರು ಕಂಡುಹಿಡಿದಿದ್ದಾರೆ.
ಆರ್ಯಾಬರ್ತ—ಆರ್ಯರು ಹುಟ್ಟಿದ ದೇಶ.
ಆಯಿತು—ಅರಿತವರಿಗತಿಸುಲಭ ಆಯಿತೆಂಬುವ ಮಾತು (ಗಾದೆ); ಗಂಡನ ಉತ್ತರ; ಮೇಲಧಿಕಾರಿಗಳಿಗೆ ನಾವು ಹೇಳುತ್ತಿರಬೇಕಾದ ಜವಾಬು.
ಆಯಿತ್ವಾರ—ವಾರದ ಕೆಲಸಗಳೆಲ್ಲ ಆಯಿತು, ಎಂದೆನಿಸುವ ವಾರ.
ಆಯುರ್ವೇದ—ಆಯುಸ್ಸನ್ನು ಕಾಪಾಡಬಲ್ಲ ಎಲ್ಲ ತಿಳುವಳಿಕೆಗಳೂ. ಆಲೋ-

ಪತಿ, ಹೋಮಿಯೋಪತಿ, ಸಿದ್ಧ, ಯೂನಾನಿ ಸಹಿತ, ಎಲ್ಲಪದ್ಧತಿಗಳೂ.

ಆಯುಸ್ಸು– ಆಯುಷ್ಕರ್ಮ ನಡೆದಂತೆಲ್ಲ ಇದು ಇಳಿಮುಖವಾಗುತ್ತದೆ.

ಆರತಿ– ಈ ಮನ್ಮಥ-ಆ ರತಿಯ ಪಕ್ಕದಲ್ಲಿ ಹಸೆಯ ಮೇಲೆ ಕುಳಿತಾಗ.

ಆರತಿತಟ್ಟೆ—ಕೀರ್ತನೆ ಕೇಳಲು ಬಂದಿರುವ ಮಹಾಭಕ್ತರನ್ನು ಚದುರಿಸಲು ಉಪಯೋಗಿಸುವ ಒಂದು ಯಂತ್ರ; ಸವಕಲುಕಾಸುಗಳನ್ನು ಶೇಖರಿ-ಸಲು ಒಂದು ಉಪಾಯ.

ಆರಾಮ—ಆ ರಾಮನಿಗೆ ಇದು ದುರ್ಲಭವಾಗಿತ್ತಾದರೂ ನಮಗೆ ಇದು ಈಗಲೂ ಎಂದಿಗೂ ಬೇಕು.

ಆರು ಚಕ್ರ—ಆರು ಚಕ್ರದ ಲಾರಿಗಳನ್ನು ತಯಾರಿಸಿದ್ದು ಏಕೆಂದರೆ, ನಾಲ್ಕು ಚಕ್ರದ ಲಾರಿಗಳಿಂದ ಪಾದಚಾರಿಗಳನೇಕರು ತಪ್ಪಿಸಿಕೊಳ್ಳುತ್ತಿದ್ದರು.

ಆರೋಗಿಸು—ಆರೋಗ್ಯಕ್ಕೆ ಹಾನಿ ಬರದಂತೆ ಆಹಾರ ಸೇವಿಸುವುದು.

ಆರ್ಯಪುತ್ರ—ಸೀತಾ, ಸಾವಿತ್ರಿ ಮುಂತಾದ ಪತಿವ್ರತೆಯರು ಗಂಡನನ್ನು 'ಮಾವನ ಮಗನೆ' ಎಂದು ಕೂಗುತ್ತಿದ್ದರಂತೆ.

ಆಲ– ಮೊಮ್ಮಕ್ಕಳು ನೇಣುಹಾಕಿಕೊಳ್ಳುವುದಕ್ಕಾಗಿಯೇ ತಾತಂದಿರು ಇದನ್ನು ನೆಟ್ಟು ಬೆಳೆಸಿದಾರೆ, ಎಂಬುದು ಕೆಲವರ ಅಭಿಮತ.

ಆಲಿಸಿ– ಆಲಿಸಿದ್ದನ್ನೆಲ್ಲ ಪಾಲಿಸಿದರೆ, ಪಾಲಿಸಿ ಎನಿಸಲಾರದು.

ಆವಂತಿ – ಧೂರ್ತರಾಡುವ ಭಾಷೆ.

ಆಶ್ಚರ್ಯ – ಗ್ರಂಥವನ್ನು ಓದಿದಾಗ, ಇದನ್ನ ಯಾಕೆ ಈತ ಬರೆದ–ಎಂಬ ಆಶ್ಚರ್ಯ ಉಂಟಾಗುವುದು ಸಹಜ; ಆಶೆ ಕೈಗೂಡಿದಾಗ ನಮ-ಗಾಗುವ ಭಾವನೆ; ಪರೀಕ್ಷೆಯ ಫಲಿತಾಂಶ ಹೊರಬಿದ್ದಾಗ, ವಿದ್ಯಾರ್ಥಿ-ಗಳ ಮನದಲ್ಲಾಗುವ ಪ್ರತಿಕ್ರಿಯೆ.

ಆಶ್ಚರ್ಯೆ—ಆಶ್ಚರ್ಯವನ್ನುಂಟುಮಾಡುವ ಚರ್ಯೆ.

ಆಶಾವಾದಿ—ತನಗಾದ ಅನಾಹುತದ ಪರಿವೆ ಇಲ್ಲದವನು; ಯಾರಿಗೆ ಸಂಕಟ ಒದಗಿದರೂ ತಾನುಮಾತ್ರ ಸಂತೋಷದಿಂದಿರುವವನು; ಮದುವಣಿಗ; ಪರೀಕ್ಷೆಗೆ ಕೂಡುವ ಹಾಸ್ಟೆಲ್ ವಿದ್ಯಾರ್ಥಿ; ಆಸ್ಪತ್ರೆಗೆ ಹೋಗಿ ವೈದ್ಯರಿಂದ ಚಿಕಿತ್ಸೆ ಮಾಡಿಸಿಕೊಳ್ಳುವ ರೋಗಿ; ಲೋಕವನ್ನು ಬರಿಯ ಮಾಯೆಯೆಂದು ನೈ ಬ್ಗ್ಗಿ ಸದೆ ಇರುವವನು; ಇತ್ಯಾದಿ.

ಆಶ್ವಾಸ—ಒಂದೇ ಉಸಿರಿನಲ್ಲಿ ಓದಬಹುದಾದಷ್ಟು ಒಂದು ಆಶ್ವಾಸ; ಅನಂತರ ಕೊಂಚ ಆ ಶ್ವಾಸ ತೆಗೆದುಕೊಂಡು ಮತ್ತೊಂದನ್ನು ಓದಬೇಕು.

ಆಶೀರ್ವಚನ - ಮೇಲಧಿಕಾರಿ ಕಾರುವ ಬೈಗಳು.

ಆಶೀರ್ವಾದಿಸುವುದು - ಹೊನ್ನ ಶೂಲದಲಿಕ್ಕಿ ಕೊಲ್ಲುವುದು.

ಆಶುಕವಿತೆ ಆಲೋಚನೆಯ ಗೋಜಿಗೆ ಹೋಗದೆ ಬರೆದ ಕವಿತೆ; ಎಂದರೆ, ಆಧುನಿಕ ಕವಿತೆ.

ಆಶೆ—ಪೌರುಷಾಶ್ವಕ್ಕೆ ಇದೇ ಛಾಟಿ (ಮಂಕುತಿಮ್ಮ), ದಡ್ಡನಿಗೆ ಇದೇ ಆಸ್ತಿ.

ಆಷಾಢಭೂತಿ—ನಾಲ್ಕು ಜನರೆದುರು ಸಭ್ಯನಾಗಿ ವರ್ತಿಸುವವ ! ನಗುನಗುತ್ತ ಶಾಲೆಗೆ ಹೋಗುವ ಹುಡುಗ; ನನ್ನ ಕಸಬೇ ಅತ್ಯಂತ ಶ್ರೇಷ್ಠ ಎಂದು ಹಿಗ್ಗುವ ಉಪಾಧ್ಯಾಯ; ಸಿನಿಮ ಮಂದಿರದ ಕತ್ತಲಲ್ಲಿ ನಮ್ಮ ಕಾಲು ತುಳಿದು ನಂತರ ಕ್ಷಮಿಸಿ ಎಂದು ಹೇಳುವ ವಿಲಾಸಿ; ಬೂದಿ ಮುಚ್ಚಿದ ಭಂಡ.

ಆಸಾಮಿ—ಆಸಾಮ್ ರಾಜ್ಯದ ನಿವಾಸಿಗಳೂ ಒಂದು ಬಗೆಯ ಆಸಾಮಿಗಳೇ.

ಆಸ್ಪತ್ರೆ - ಮದ್ಯದ ಅಮಲಿನಲ್ಲಿ ಕಾರು ಓಡಿಸುವ ಮಹನೀಯರೆಲ್ಲ ಅಷ್ಟು ವೇಗವಾಗಿ ವಾಹನಗಳನ್ನು ಬಿಡುವುದು ಇದನ್ನು ಸೇರುವುದಕ್ಕಾಗಿಯೇ.

ಆಸ್ತಿ - ನಾವು ಬಿಟ್ಟು ಹೋಗಲೇಬೇಕಾದದ್ದು, ಲಾಯರುಗಳಿಗಾಗಿ.

ಆಸ್ತಿಕ—ಓದು ಬರುವ ಹಾವುಗಳು ಇದನ್ನು ಕಾಣುತ್ತಲೂ ಓಡಿಹೋಗುವುವು.

ಆಹಾರ—ಕೊಂದ ಪಾಪ, ತಿಂದು ಪರಿಹಾರ (ಗಾದೆ), ಜಗತ್ತಿನ ಜಾಡ್ಯಗಳಿಗೆಲ್ಲ ಇದೇ ಜನ್ಮಸ್ಥಾನ; 'ಆಹಾರೆ ವ್ಯವಹಾರೆ ಚ ತ್ಯಕ್ತ ಲಜ್ಜಃ ಸುಖೀ ಭವ'.

ಆಳು—ಈತ ಮಾಡುವ ಕೆಲಸವೆಲ್ಲ ಹಾಳು; ಆದ್ದರಿಂದಲೇ ಹಾಳು ಮಾಡುವವರೆಲ್ಲ ಸಾಮಾನ್ಯವಾಗಿ ಆಳುಗಳನ್ನಿರಿಸಿಕೊಂಡಿರುವುದು; 'ಆಳುತನವಾಭರಣವೆ?'.

ಆಂಗ್ಲೇಯರು ಸರ್ವಜ್ಞನಿಗೆ ಇವರು, "ಕಾಲ ಕುಪ್ಪಸದವರು, ಮೇಲೆ ಟೊಪ್ಪಿಗೆಯವರು, ಬಾಲೆಯರ ಮುಖದ ...ಸಿಗಳು"

ಇ

ಇ—ಸ್ಕೂಲ್, ಸ್ಟಾರ್ಟ್, ಸ್ಪೀಡ್ ಮುಂತಾದ ಆಂಗ್ಲ ಪದಗಳನ್ನು ಕನ್ನಡಿಸಲು ಇ ಸೇರಿಸಿದರೆ ಸಾಕು, ಎಂಬುದು ಹಲವರ ಅಭಿಪ್ರಾಯ.

ಇಕ್ಕು—ಇಕ್ಕೋ ದೇವರು ಇಕ್ಕೇ ಇಕ್ಕುತ್ತಾನೆ (ಗಾದೆ) ; ಕರ್ಮ ಫಲವನ್ನು ಕೊಡದಿರಲು ಅವನಿಂದಲೂ ಸಾಧ್ಯವಿಲ್ಲ.

ಇಗ್ನೇಶ್ವರ— ತನ್ನ ಹೆಸರಿನ ಉಚ್ಚಾರಣೆಗೆ ಒದಗುವ ವಿಘ್ನಗಳನ್ನು ನಿವಾರಿಸಲಾಗದ ಒಂದು ದೇವತೆ.

ಇಂಗು—ತುಂಗೆಯಾದರೇನು, ಗಂಗೆಯಾದರೇನು, ಇಂಗುಹಾಕಿದರೆ ಸಾರು ಚೆನ್ನ (ಗಾದೆ) ; ಅಡಿಗೆ ಮಾಡಿದವರ ಹೆಸರಿನ ಮೇಲೆ ಸಾರಿನ ರುಚಿಯನ್ನು ನಿರ್ಧರಿಸುವವರಿಗೆ ಈ ಗಾದೆ ಚೆನ್ನಾಗಿ ಬುದ್ಧಿ ಕಲಿಸುತ್ತದೆ. ಇದನ್ನು ಕಪಿಸ್ವಭಾವದವರಿಗೆ ತಿನ್ನಿಸದಿರುವುದೇ ಮೇಲು.

ಇಟ್ಟಿಗೆ—ಪೂರ್ವ ಕಾಲದಲ್ಲಿ ಮೂಗು ಕುಯ್ದು ಇದರ ಪುಡಿಯನ್ನು ತಿಕ್ಕಿ ಪಡುವಲ ಗಾಳಿಗೆ ಹಿಡಿಯುತ್ತಿದ್ದರಂತೆ–ಸ್ವಂತ ಮೂಗನಲ್ಲ, ಇತರರದು. "ಇಟ್ಟಲ್ಲೇ ಬಿದ್ದಿರೊ, ಇಟ್ಟಿಗಿ ಮಗನೇ" (ಗಾದೆ).

ಇಡ್ಲಿ—ಇಡ್ಲಿ ಹೊಡಿಯೋಕೆ ಕೊಡ್ಲಿ ಕೇಳಿದನಂತೆ (ಗಾದೆ).

ಇತ್ತ—ಇತ್ತ 'ತಿಂಡಿ' ಅತ್ತ 'ತಿನಿಸು' ಇತ್ತ 'ಗಾಡಿ' ಅತ್ತ 'ಡಬ್ಬಿ'— ಕನ್ನಡನಾಡದೆತ್ತಲಖಂಡ ; ಸರ್ವಜ್ಞ ?

ಇತತ್ತ—ಇತ್ತತ್ತ ಬಾ ಅಂದರೆ, ಇಂಗ್ಲೀಷರು ಇದ್ದ ಮನೆ ಕಿತ್ತುಕೊಂಡರು.

ಇತ್ಯಾದಿ—ಮುಂದಕ್ಕೆ ಬರೆಯಲು ಬುದ್ಧಿ ಓಡದಿದ್ದರೆ, ಈ ಪದವನ್ನುಪ-ಯೋಗಿಸಿ ಬಚಾವಾಗಬಹುದು.

ಇದ್ದಲು—ವಜ್ರವೂ ವಸ್ತುತಃ ಇದ್ದಲೇ ಎಂಬುದನ್ನು ಕುಮಾರವ್ಯಾಸನು ತಿಳಿದಿದ್ದನು. "ರತುನಾವಳಿಯ ರಾಶಿಗಳ್ ಇದ್ದಲಾದ್ದುವು ಬಿದ್ದ ಕಿಡಿ-ಗಳಲಿ."

ಇದು—ಭಾಷಣಕಾರರ ಆಸರೆ; ಇದು ಮಾಡಲು ಇದೇ ಇಲ್ಲದೇ ಹೋದರೆ, ಅವರು ಇದು ಇದು ಎಂದು ಬಹಳ ಇದಾಗಿ ಇದು ಮಾಡಬಹುದಾಗಿದೆ.

ಇಂದಿರಾಜ—ಸಾಕ್ಷಾತ್ ಕಾಮದೇವನೇ ಈತ.

ಇನ್‌ಷೂರನ್ಸ್ ಏಜೆಂಟ್—ಜಾತಸ್ಯ ಮರಣಂ ಧ್ರುವಂ, ಎಂದು ನಮಗೆ ಪದೇ ಪದೇ ನೆನಪು ಕೊಡುವ ಉಪಕಾರಿ.

ಇಮಾಂಸಾಬಿ— ಈತನಿಗೂ ಗೋಕುಲಾಷ್ಟಮಿಗೂ ಸಂಬಂಧವಿಲ್ಲವೆಂಬ ಪ್ರತ್ಯೇಕ ಮನೋಭಾವ ಈಗ ನಾಶವಾಗುತ್ತಿದೆ.

ಇರವು—ಕನ್ನಡವ ಕುಲಗೆಡಿಸಿ ಬನ್ನ ಬಡಿವುತ ನುಡಿದು ಉನ್ನತದಿ ಮೆರೆ ಯುವಾ ಕನ್ನಡಿಗನಿರವಿನಿಂ ಕುನ್ನಿಲೇಸೆಂದ, ಸರ್ವಜ್ಞ.

ಇಲಿ—ಬೆಕ್ಕುಗಳ ಸೇವೆಗಾಗಿ ಪರಮಾತ್ಮ ಸೃಷ್ಟಿಸಿರುವ ಪ್ರಾಣಿವರ್ಗ; ತಾವೊಂದಿಲಿಯಂ ಪಿಡಿದೊಡಮದು ಗೆರ್ಬುಲಯೆಂಬರ್.

ಇಲ್ಲ—ಬಚ್ಚಿಟ್ಟದ್ದು ಪರರಿಗೆ—ಎಂಬ ಸರ್ವಜ್ಞೋಕ್ತಿಯನ್ನು ನಂಬಿ, ತಮ್ಮಲ್ಲಿರುವ ಧನಕನಕಗಳನ್ನು ಬಚ್ಚಿರಿಸಿ ಹೇಳುವ ಮಾತು.

ಇಲ್ಲೋಪತಿ—ಗೃಹವೈದ್ಯ ಪದ್ಧತಿ.

ಇಶ್ಶಿ— ಶಿಶುಸಾಹಿತ್ಯದ ಒಂದು ಪದ.

ಇಷ್ಟರಲ್ಲೇ— ಮಂತ್ರಿ ಭಾಷೆಯಂತೆ, ಮೂರು ವರ್ಷದೊಳಗೆ.

ಇಷ್ಟಾವಕ್ರ—ಮನಬಂದಂತೆ ಮೈಯನ್ನು ಬಗ್ಗಿಸಬಲ್ಲ ನೃತ್ಯಕುಶಲಿ, ಸರ್ಕಸ್ ತರುಣ.

ಇಷ್ಮರೋಗ— ಸ್ವಮತ ಸ್ವಗ್ರಾಮ ಸ್ವಕುಲಗಳ ಮೇಲಿನ ವಿಪರೀತ ಮೋಹ.

ಇಸ್ಪೀಟು—ಈಗಿನ ಗಂಜೀಪು- ಗಂಜೀಪು ಆಡೋರಿಗೆ ಗಂಜಿಯೂ ಸಿಗದು- (ಗಾದೆ), ಇನ್ನಾವ ರೀತಿಯಲ್ಲೂ ಕಾಲಹರಣಮಾಡಲರಿಯದವರು ಈ ಎಲೆ ಮುಂದೆ ಕುಳಿತು ಹಗರಣಮಾಡುವರು; ಸೈತಾನದ ವೇದ ; ಭಂಡರ ಭಾಗವತ.

ಇಸುಪ್ರತ್ಯಯ—ಇಂಗ್ಲೀಷಿನವರೂ ಇದನ್ನು ಸೇರಿಸುವರು; ಸಿವಿಲ್-ಸಿವಿಲಿಸು ಸೆರ್‌ವ್-ಸೆರ್ವಿಸು.

ಇಸಂ—ರಾಜಕೀಯ ತತ್ವ; ಅವುಗಳಿಗಾಗಿ ಚಳುವಳಿ ಹೂಡುವ ವ್ಯಕ್ತಿ.

ಇವತ್ತು—ನಾಳೆ ಏನಪ್ಪ ಗತಿ ಎಂದು ನಿನ್ನೆ ಪೇಚಾಡಿದೆವಲ್ಲಾ, ಆ ನಾಳೆ.

ಇಳಿದಾಣ—ಏರೋಪ್ಲೇನುಗಳು ಇಳಿಯುವ ತಾಣ.

ಇಂಕಿ—ಕಾಡಿಗೆರಹಿತೆಯರು ಪ್ರೇಮಪತ್ರಬರೆಯಲು ಇದನ್ನೇ ಉಪಯೋಗಿಸಬೇಕಾಗುತ್ತದೆ.

ಇಂಥಿಂಥ— ಇಂಥಿಂಥ ಎಂದು ಉಸುರಲು ತ್ರಾಣವಿಲ್ಲದವರು ಇಂಥ ಎಂದು ಮಾತ್ರ ಹೇಳಿದರೂ ಸಾಕಾಗುತ್ತದೆ.

ಇಂದುಮತಿ — ಇವತ್ತಿನ ಬುದ್ಧಿಯ ಮಟ್ಟ.

ಇಂದುಹಾಸ—ನಾಳೆ ಏನು ಕಾದಿದೆಯೋ, ಇಂದು ಸಂತೋಷವಾಗಿರುವುದೇ ಜಾಣತನ.

ಈ

ಈಕಾಂಕ್ಷೆ—ಸದ್ಯದಲ್ಲಿ ಮನವನ್ನು ಬಾಧಿಸುತ್ತಿರುವ ಆಶೆ.

ಈಗಲೇ— ಮಂತ್ರಿಭಾಷೆಯ ರೀತ್ಯಾ, ಇನ್ನೊಂದಾರು ತಿಂಗಳಲ್ಲಿ.

ಈಚಮನ—ಈಚಲಮರದಡಿಯಲ್ಲಿ ಕುಳಿತು ಕುಡಿಯುವುದು.

ಈಚಲನೀರು—ನಾಚಿಗೆ ಕೆಡಿಸುವ ನೀರು.

ಈಚಂದ್ರತಾರಕ—ನಮ್ಮ ಮಾಂಸ ಚಕ್ಷುಸ್ಸಿನಿಂದ ನಾವು ಕಾಣುತ್ತಿರುವ ಈ ಚಂದ್ರನೂ ತಾರೆಗಳೂ ಇರುವ ತನಕ.

ಈಜಾನುಬಾಹು—ಈಜುವುದಕ್ಕನುಕೂಲವಾಗುವಷ್ಟು, ಉದ್ದವಾದ ಬಾಹುಗಳನ್ನುಳ್ಳವನು.

ಈದಿತ್ಯ—ಈ ಚಂದ್ರನನ್ನು ನೋಡಿ.

ಈಶ್ವರ—ಜಗತ್ತಿನಲ್ಲಾಗುತ್ತಿರುವ ಅನಿಷ್ಟಗಳಿಗೆಲ್ಲ ಹೊಣೆಗಾರ.

ಈಸುವವ—ಈಸುವವನಿಗೆ ಮೀಸೆ ಭಾರವಲ್ಲ ಎಂದು ಗಾದೆ ಇರುವುದರಿಂದ ಅದನ್ನು ಹೊತ್ತುಕೊಂಡೇ ನೀರಿಗಿಳಿಯಬಹುದು.

ಈಸೀಸು—ಈಸೀಸು ಅಗಲ ದೋಸೆ ಏಸೇಸು ಮೆದ್ದಿ ?—ಎಂದು ನಮ್ಮ ಪೂರ್ವಿಕರು ಪರಸ್ಪರ ಮೂದಲಿಸುತ್ತಿದ್ದರಂತೆ.

ಉ

ಉಕ್ಕಡಾವಸ್ಥೆ—ಕಳ್ಳಮಾಲಿನೊಂದಿಗೆ ಉಕ್ಕಡದ ಬಾಗಿಲಿನಲ್ಲಿ ಸಿಕ್ಕಿ ಬಿದ್ದವನ ಅವಸ್ಥೆ.

ಉಗ್ರಸ್ಥಾನ—ಉಗ್ರಸ್ಥಾನೇಷು ಪೂಜ್ಯಂತೆ.... ಎಂಬ ಮಹಾವಾಕ್ಯವನ್ನು ನೋಡಿ.

ಉಗಾದಿ—ಉಂಡದ್ದೇ ಉಗಾದಿ (ಬಡವರಿಗೆ).

ಉಗುಳುಭಟ್ಟ—ನಿಂದೆಮಾಡುವುದೇ ಜೀವನೋಪಾಯವಾಗಿರುವವ.

ಉಗುಳುನೀತಿ—ನಾಟಕಮಂದಿರಗಳಲ್ಲಿ ಮುಂಜಾಗ್ರತೆಗಾಗಿ 'ಉಗುಳಬಾರದು' ಎಂದು ಬೋರ್ಡುಗಳಲ್ಲಿ ಬರೆದು ತೂಗಿರುತ್ತಾರೆ.

ಉಂಡವ—ಒಪ್ಪತ್ತುಂಡವ ಪುಣ್ಯವಂತ, ಎರಡು ಹೊತ್ತುಂಡುವನಾಣ್ಯವಂತ, ಮೂರು ಹೊತ್ತುಂಡವನಿಗೆ ಮೂರು ವರ್ಷ ಸಜಾ(ರೇಷನ್ ಗಾದೆ).

ಉಂಡಾಡದಭಟ್ಟ—ಕೃತಘ್ನ.

ಉಡಿಗೆ—ಸ್ತ್ರೀಯರ ಉಡಿಗೆ-ತೊಡಿಗೆಗಳು ಪುರುಷರನ್ನು ಮೆಚ್ಚಿಸುವುದಕ್ಕೋ, ಇತರ ಸ್ತ್ರೀಯರನ್ನು ಕಿಚ್ಚಿಸುವುದಕ್ಕೋ, ಎಂಬುದು ಇನ್ನೂ ವಿವಾದಾಸ್ಪದ; ನಮ್ಮ ವರಮಾನವನ್ನು ಮುಚ್ಚಲು ನಾವು ಉಪಯೋಗಿಸುವ ವಸ್ತುಗಳು.

ಉಡುಪು—ಅಂಗಸೌಷ್ಠವವನ್ನು ಪ್ರದರ್ಶಿಸಲು ಒದಗುವ ಒಂದು ಬಗೆಯ ಆಚ್ಛಾದನ; ಅಧಿಕಾರ, ಧನ, ಮತಧರ್ಮ, ಭೋಗ, ಯೋಗ, ಸ್ವದೇಶ, ಬುದ್ಧಿ, ಸಿದ್ಧಿ, ಇತ್ಯಾದಿಗಳನ್ನು ಪ್ರದರ್ಶಿಸಿ ಮೆರೆಯಲೋಸುಗ ತರತರದ ಉಡುಪುಗಳನ್ನು ಧರಿಸುತ್ತಾರೆ. ನಮ್ಮ ಯೋಗ್ಯತೆಯನ್ನು ಇತರರು ನಮ್ಮ ಉಡುಪಿನಿಂದಲೇ ನಿರ್ಧರಿಸಬೇಕಾಗುತ್ತದೆ, "ವಾಸಃಪ್ರಧಾನಂ ಖಲು ಯೋಗ್ಯತಾಯಾಃ."

ಉತ್ತಮ—ತಾ ಮಾಡುವುದು ಉತ್ತಮ, ಅದು ಏನೇ ಆಗಲಿ.

ಉತ್ತಮರು—ಇವರಿಗೆ ಮಾತ್ರ ಕೆಲವೆಡೆ ಕ್ಷೌರಕ್ಕೆ ಏರ್ಪಾಟು ಉಂಟು.

ಉತ್ತಮಪುರುಷ—ನಾನು; ಭಾಷಣ ಮಾಡದಿರುವವನು; ನಡೆವಂತೆ ನುಡಿವವನು.

ಉತ್ತರ—ಉತ್ತರನದೇನು, ಮಹಾ ? ಎಲ್ಲರ ಪೌರುಷಾನೂ ಎಲೆ ಮೇಲಿನ ಊಟಕ್ಕೆ ತಕ್ಕಂತೆಯೇ.

ಉತ್ತರಕ್ರಿಯೆ—ಪರೀಕ್ಷೆಗಳಲ್ಲಿ ಉತ್ತರ ಬರೆಯುವ ಕೆಲಸ.

ಉತ್ತರಮೀಮಾಂಸೆ—ಉತ್ತರಗಳಿಗೆ ನಂಬರ್ ಹಚ್ಚುವ ಕೆಲಸ.

ಉತ್ತರಾಯಣ—ಪರೀಕ್ಷೆಯ ಋತು, ಮಾರ್ಚ ತಿಂಗಳಿಂದ ಜೂನ್‌ವರೆಗೆ.

ಉತ್ಥಾನಪಾದ— ಯಾವ ಕಾರಣದಿಂದಲಾದರೂ, ಕಾಲೆತ್ತಿದ ಮಹನೀಯ;

ವರ್ಗದ ಆರ್ಡರ್ ಬಂದು, ಪರಸ್ಥಳಕ್ಕೆ ಹೊರಡಲನುವಾಗಿರುವ ಅಧಿಕಾರಿ.

ಉತ್ಫಲ....ಉತ್ತು ಬಿತ್ತಿ ಬೇಸಾಯ ಮಾಡಿದುದರ ಫಲ.

ಉತ್ಸವ—ಉತ್ಸವಪ್ರಿಯಾಃ ಖಲು ಮನುಷ್ಯಾಃ ; ದಂಗುಬಡಿಯಲು ಒಂದು ಒಳ್ಳೆಯ ಉಪಾಯ ; ಇದನ್ನು ಉತ್ಕವ—ಎಂದು ಹೇಳಲೇಬಾರದು.

ಉತ್ಸಾಹ— ನಮ್ಮಲ್ಲೆಲ್ಲ ಅಡಕವಾಗಿರುವ ದೊಡ್ಡ ಗುಣ.

ಉತ್ತೇಜನ—"ಮೂಗಿನೊಳುಳುವಂಗೆ ನೇಗಿಲಂ ಕೊಡುವುದು."

ಉದಕಮಂಡಲ— ಒತ್ತೈ (ಒಂಟಿ) ಕಲ್‌ಮಂದ್ (ತೊದವರ ಪಾಳ್ಯ)= ಊಟಕಮಂಡ್= ಉದಕಮಂಡಲ.

ಉದರ—ಉದರನಿಮಿತ್ತಂ ಬಹುಕೃತ ರೇಷನ್.

ಉದರಯಾತ್ರೆ— ಬದುಕು.

ಉದರರಾಗ—ಹೊಟ್ಟೆಯೊಳಗಿನ ತಾಳಕ್ಕೆ ತಕ್ಕಂತೆ.

ಉದ್ಗ್ರಂಥ—ಉದ್ದುದ್ದ ಬೆಳಸಿ ಬರೆಯಲಾಗಿರುವ ಗ್ರಂಥ; ಓದದೆ ಇದ್ದರೂ ಓದಿಲ್ಲ ಎಂದು ಹೇಳಿಕೊಳ್ಳಲು ಜನರು ನಾಚುವ ಗ್ರಂಥ.

ಉದ್ಯಾನವಿಜ್ಞಾನ—ಗಿಡಗಳನ್ನು ಬೆಳಸಿ ಬೋಳಿಸಿ ಪಕ್ಷಿ ಮೃಗಾದಿಗಳಂತೆ ಕಾಣುವ ಹಾಗೆ ಅಂದಗೆಡಿಸುವುದು.

ಉದಾರಿ—ಕುರುಡು ಭಿಕ್ಷುಕನಿಗೆ ಒಂದಾಣೆ ಕೊಟ್ಟು ಒಂದೂ ಕಾಲಾಣೆ ಹಿಂದಕ್ಕೆ ತೆಗೆಯುವವ ; ಸಾವಿರ ಜನರಿಂದ ಲಕ್ಷ ಕಿತ್ತು ಒಬ್ಬನಿಗೆ ಹತ್ತು ಕೊಡುವವ.

ಉದ್ದಾಲಕ—ಚಂಡಿಯ ಗಂಡ ; ಪುರುಷ ಸಮೂಹ.

ಉಪಕಥೆ—ಹರಿಕಥೆ ಶಿವಕಥೆಗಳನ್ನು ಕೇಳಲು ಹೋಗುವವರು ಇದನ್ನು ಕೇಳಿ ಹಿಂದಕ್ಕೆ ಬರುವರು.

ಉಪಚಾರ—ಉಪ್ ತಿಂದವನು ಮಾಡಬೇಕಾದ ಕೆಲಸ.

ಉಪದೇಶ—ಉಪದೇಶ ಕೊಡಲು ಹೋಗಬೇಡಿ—ಇದೇ ಅತಿಮುಖ್ಯ ಉಪ-ದೇಶ ; ಅತೀ ಅಗ್ಗದ ಮಾಲು.

ಉಪನ್ಯಾಸಕರು—ಮಂದಿಮಾಗಧರು.

ಉಪಾಧ್ಯ—ಉಪಾಧಿವಂತ.

ಉಪಾಯವೇದಾಂತ—ಸ್ವಯಂ ಆಚಾರ್ಯರ ಮಾರ್ಗ; ರಾಜಕೀಯ ಚಳುವಳಿ

ಉಪ್ಪಿಟ್ಟು—ರವೆಯುಪ್ಪು ಜೀವನಾಧಾರ.
ಉಪ್ಪು—ಇದನ್ನು ತಿಂದವನು ನೀರು ಕುಡಿದೇ ಕುಡಿಯುತ್ತಾನಂತೆ.
ಉಬ್ಬು—ಉದ್ದು ಉಬ್ಬಿದರೆ, (ಉಬ್ಬಿಸುವವರಿದ್ದರೆ) ಮದ್ದಳೆಯಾದೀತು:
ಉಭಯತೋಭ್ರಷ್ಟ—ನೀರಿನಲ್ಲೂ ಕೆಟ್ಟ, ನೆಲದಲ್ಲೂ ಕೆಟ್ಟ.
ಉಭಯಸಂಕಟ—ತುಪ್ಪದಕೊಡದ ಮೇಲಣ ಇಲಿ, ಹೊಡೆಯೋಣವೆ ? ಬೇಡವೆ ?
ಉಮೇದುವಾರ—ಒಂದುವಾರದ ಮಟ್ಟಿಗೆ ಉಮೇದು ತೋರುವವ; ಯಾರೂ ಅದುವರೆಗೂ ಅರಿಯದ ತ್ಯಾಗಿ.
ಉಯ್ಯಾಲೆ—ಸಿನಿಮಗಳಲ್ಲಿ, ಪ್ರೇಮಿಗಳು ಕೂತು ಹಾಡುವ ಸ್ಥಳ.
ಉರಿಗಾಳು—ಖಾರ ಬೆರೆಸಿದ ಟೀಕೆ.
ಉರಿದುಂಬಿಸು—ಹೊಟ್ಟೆಕಿಚ್ಚನ್ನುಊದಿ ಬೆಳೆಯಿಸುವುದು, ಕುಹಕಿಗಳ ತಂತ್ರ.
ಉರು—ಗುರುವಿಗೆ ಬೇಕಾದದ್ದು ತಿರುಮಂತ್ರ, ಅಲ್ಲ, ಉರುಮಂತ್ರ.
ಉರುಳುಸೇವೆ—ನೌಕರ ಜೀವನ.
ಉಲಿವ—ಆವಾಗಲುಂ ಉಲಿವ ಸತಿ ಹೊಲ್ಲ (ಸರ್ವಜ್ಞ.)
ಉರ್ವಶಿ—ಈಕೆ ಶಾಪ ಕೊಟ್ಟರೂ ಕೆಲವರು ಕೃತಾರ್ಥರಾಗುತ್ತಾರೆ.
ಉಷ್ಣಪಕ್ಷ—ಸಾಲದ ತಾಪದಿಂದ, ೧೫ನೇ ತಾ॥ ನಿಂದ ೩೦ ರ ವರೆಗೆ.
ಉಷಾ—ವಿದ್ಯಾವಂತರಾದ ನಾಗರಿಕರು ಎಂದೂ ನೋಡದ ವಸ್ತು.
ಉಸ್ಸಪ್ಪ—ಎಲ್ಲ ನಂಟರೂ ಕೈ ಬಿಟ್ಟಾಗ, ನಮಗೊದಗುವುದು.
ಉಸುರಾರಿ—ಉಬ್ಬಸ.
ಉಳಿ—ಸಾವಿರ ಉಳಿ ಪೆಟ್ಟು ಬಿದ್ದರೇನೇ ಒಬ್ಬ ದೇವತಾಮನುಷ್ಯ.
ಉಳಿಕೆ—ವರಮಾನ ಹೆಚ್ಚಾದಾಗ ಉಳಿಸಲಾಗುವುದೇ ಇಲ್ಲ; ಆದ್ದರಿಂದ ವರಮಾನ ಕಡಿಮೆ ಇರುವಾಗಲೇ ಉಳಿಸಬೇಕು.
ಉಳಿತಾಯ—ನಮಗೆ ಸಾಲ ಕೊಡಬೇಕಾದವರು ಮಾಡಬೇಕಾದ ಕರ್ತವ್ಯ.
ಉಳುವವ—ಉಳುವವನೊಬ್ಬನಾದರೆ, ಉಮ್ಮಸ್ ಕೊಡುವವರು ಹತ್ತುಜನ.

## ಊ

ಊ—ಶಿಶುಸಾಹಿತ್ಯದ ಹುಣ್ಣು.

ಊಟ—ಡೊಂಕುಬಾಲಕ್ಕೆ ಇದೇ ಕಾರಣ; ಡೊಂಕುಬಾಲದ ನಾಯಕರೆ! ನೀವೇನೇನೂಟ ಮಾಡುವಿರಿ? ಎಂಬ ಪ್ರಶ್ನೆಯನ್ನು ಕೇಳಿ.

ಊತನ್—ಅಶ್ವತ್ಥಾಮನ್; 'ಆತನ್ ದುರ್ಯೋಧನನ್; ಈತನ್ ರವಿಜಾತಂ; ಊತನ್ ಅಶ್ವತ್ಥಾಮನ್.'

ಊದಿ—'ಊದಿ ಕಿಚ್ಚಿದ ಕೆಂಡ.'

ಊರು – ತಳ ಊರಿದ ಸ್ಥಳ.

ಊರುಗೋಲು— ಊರಲ್ಲೇ ಆಗುವ ಅಪಮಾನ.

ಊರುಭಂಗ—ಪಾರ್ಟಿ ಜನಗಳು ಹೆಚ್ಚಿದ ಊರಿನ ಅವಸ್ಥೆ.

ಊರ್ಧ್ವಮೂಲಂ—ಊರ್ಧ್ವಮೂಲಂ ಅತಃ ಶಾಖಂ—ಭಾರತ ರಾಜ್ಯಾಂಗ ವ್ಯವಸ್ಥೇ.

ಊರ್ವಶೀ—ಊರನ್ನು ವಶೀಕರಿಸುವವಳು.

ಊಳಿಡುವುದು—ರಾತ್ರಿ ಹೊತ್ತು ನಾಯಿ ಊಳಿಟ್ಟರೆ, ಸಾವಿನ ಸೂಚನೆ ಎನ್ನುತ್ತಾರೆ. ಏಕೆಂದರೆ, ಆ ನಾಯಿಯನ್ನು ಎದುರು ಮನೆಯವರು ಕಲ್ಲು ಹೊಡೆದು ಸಾಯಿಸುವ ಸಂಭವ ಇದೆ.

## ಋ

ಋಣ—ತುಪ್ಪ ಕುಡಿಯಲು ಹಿರಿಯರು ನಮಗೆ ಹೇಳಿಕೊಟ್ಟಿರುವ ಒಂದು ಸುಲಭ ಮಾರ್ಗ.

ಋಣಹದ್ದು—ಸಾಲ ವಸೂಲು ಮಾಡುವುದಕ್ಕಾಗಿ ನಮ್ಮ ಬಾಗಿಲಿಗೆ ಬರುವವ.

ಋಣಾನುಬಂಧ—ಹೋದ ಜನ್ಮದಲ್ಲಿ ಸಾಲ ತೀರಿಸದೆ ಇದ್ದುದ್ದರಿಂದ ಈ ಜನ್ಮದಲ್ಲಿ ಪಶು, ಪತ್ನಿ—ಸುತಾಲಯಗಳು; ಆದ್ದರಿಂದ, ಮುಂದಿನ ಜನ್ಮದಲ್ಲಿ ಇವು ಬೇಕಾದವರು ಈ ಜನ್ಮದಲ್ಲೂ ಸಾಲ ತೀರಿಸಕೂಡದೆಂಬುದು ಸಿದ್ಧ.

ಋಷಿ—ಈತನ ಮೂಲವನ್ನು ಹುಡುಕುವುದು ತಪ್ಪು.

ಋಷೀಕೇಶ—ದಾಡಿ.

## ಎ.

ಎಕ್ಕಡ—ನಾವು ಹೋದಕಡೆ ಎಲ್ಲ ನಮ್ಮ ಪಾದ ಹಿಡಿದು ಬರುವ ಅವಳಿ–ಜವಳಿ.

ಎಕ್ಸಿಬಿಷನ್—ತರತರದ ನರಪ್ರಾಣಿಗಳು ನೋಟಕ್ಕಾಗಿ ಬರುವ ಸ್ಥಳ.

ಎಂಜಲಿಬಂಧ—ಎಂಥದ್ದಾದರೂ ಕೊಡಿ ಎಂದು ಕಾಲು ಹಿಡಿಯುವ ಪರಿ.

ಎತ್ತು—ಎತ್ತಿ ಕೊರಳಿನ ಮೇಲಿರಿಸಿದರೆ ಎಳೆಯುತ್ತೇನೆ ಎಂಬ ಪ್ರಾಣಿ.

ಎತ್ತಿಷ್ಮತ !—ಎತ್ತಿ ಬಿಸಾಕು !

ಎಂತರಾಟ—ಎಂತೆಂತ ದೇವರಿಗೆಲ್ಲ ಇದೇ ಆಟ, ಈ ಎಂತರ ಯುಗದಲ್ಲಿ.

ಎದೆ—ನ್ಯೂಮೋನಿಯದ ಉಗಮಸ್ಥಾನ; ಆದ್ದರಿಂದ, ಎಂಟೆದೆಯಿರುವವನಿಗೆ ಇನ್ನೂ ಅಪಾಯ.

ಎನ್ಬಿ—ಪ್ರಪಂಚದ ಚರಾಚರವಸ್ತುಗಳಲ್ಲೆಲ್ಲ ಇದೇ ಅತೀ ಹೆಚ್ಚಿನ ಭಾಗ.

ಎಣ್ಣೆ—ಎಣ್ಣೆ ಬಂದಾಗ, ಎಳ್ಳು ಕೊಟ್ಟವರು ಹಣಕ್ಕೆ ಬಂದರು (ಗಾದೆ) ಎಣ್ಣೆ ಬಂದಾಗ, ಟೈರೇ ಬರ್ಸ್ಟ್ (ಗಾದೆ) ಪಟ್ಟಣಗಳಲ್ಲಿ ಪಂಪಿರಿಸಿರುವ ಕಡೆಗಳಲ್ಲೆಲ್ಲ ಇದು ದೊರೆಯುತ್ತದೆ ! ; ಉಂಡ ಎಲೆಗೆ ಎಣ್ಣೆ ಸವರಿ ಎಸೆದರೆ, ನೆರೆಮನೆಯವರು ನಮ್ಮನ್ನು ಶ್ರೀಮಂತರೆಂದುಕೊಳ್ಳುವರು.

ಎಮ್ಮೆ—ಅಸಂಸ್ಕೃತರ ಹೆಮ್ಮೆ ; ಇದರ ಮೈ ಕೆಸರಾದರೆ ನಮ್ಮ ಬಾಯಿಗೆ ಮೊಸರು, ಇದರ ಪ್ರಭಾವದಿಂದ ಮೇಧಾವಿ ಕೂಡ ಹತನಾದ(ಪುರಾಣ); ಬಸ್ಸು ಲಾರಿಗಳ ಇನ್‌ಸ್ಪೆಕ್ಟರಾಗಿಯೂ ಇದು ಜನಸೇವೆ ಸಲ್ಲಿಸುತ್ತದೆ.

ಎರಗಿವಿ—ಚಾಡಿ ಕೇಳಲು ಮೀಸಲಾಗಿರುವ ಕಿವಿ.

ಎಲವೋ—ಹೀಗೆಂದರೆ, ನರಕ ಎಂದರ್ಥ.

ಎಲೆ—ಎಲೆ ಹಾಕೊ, ಮಹಾರಾಯ, ಅಂದ್ರೆ, ನಮ್ಮ ಜಾತಿಯವರು ಎಷ್ಟು ಜನ, ಅಂದ. ಎಲೆಮರೆ ಕಾಯನ್ನು ತಿನ್ನುವವರೇ ಗತಿ ಇಲ್ಲ.

ಎವೆ—ಕಣ್ಣಾಲಿಗೆ ಎವೆ ಅಡ್ಡ.

ಎಸ್ಸಾರ್—ಕೆಳದರ್ಜೆಯ ನೌಕರ ಮೇಲಾಧಿಕಾರಿಗೆ ಹೇಳುತ್ತಿರಬೇಕಾದ ಜವಾಬು.

ಎಳನೀರು—ಎಳೆ ವಯಸ್ಸಿನಲ್ಲಿ ತೆಂಗಿನ ಸಸಿಗೆ ನಾವು ಎರೆದ ನೀರು.

ಏ

ಏಕಚ್ಛತ್ರಾಧಿಪತಿ—ಒಂದೇ ಕೊಡೆ ಇರುವವ.

ಏಕದೃಷ್ಟಿ—ಕಾಗೆ ; ಪಿಂಡದ ಮೇಲೆಯೇ ದೃಷ್ಟಿ ಇರುವವ.

ಏಕಧುರೀಣ— ಒಂದು ತರಹದ ಎತ್ತು; ಹಲಮಲ್ಲದೆ ಶಕಟಮಂ ಪೊರಲರಿಯದ, (ಅಥವಾ) ಶಕಟಮಲ್ಲದೆ ಹಲಮಂ ಪೊರಲರಿಯದ ಏಕ ಧುರಮಹ ಎತ್ತು; ಎಕ್ಸ್‌ಪರ್ಟ್ ಎಂಬ ಏಕಶಾಸ್ತ್ರ ಪ್ರವೀಣ.

ಏಕನಾದ—ಬೇಜಾರುಂಟುಮಾಡುವಷ್ಟು ಒಂದೇ ವಿಷಯವನ್ನರಿತು ವಿವರಿಸುವ ಭಾಷಣ.

ಏಕಪತ್ನೀವ್ರತಸ್ಥ—ಒಂದೇ ದೇವರನ್ನು ಪೂಜಿಸುವವ.

ಏಕಪಾದಾಸನ—ಅಹವಾಲು ಹೇಳುವಾಗ ಇದೇ ಪ್ರಯೋಜನಕರ.

ಏಕಾಏಕಿ—ಗಂಡಾ ಹೆಂಡತಿ.

ಏಕಾಗೀ—ಒಂದೇ ಕಾಗೆ.

ಏಕಾಂತ—ಕಾಂತನೊಂದಿಗಿರುವುದು. ನಾಲ್ಕು ಕಿವಿ ವರೆಗೆ ಏಕಾಂತ ; ಆರು ಕಿವಿ ವರೆಗೆ ಲೋಕಾಂತ.

ಏಕಾಂತವಾಸ—ಸಜ್ಜನರ ಪಾಡು ; ಕೆಟ್ಟವರ ಗುಂಪಿನಲ್ಲಿ ನಾವು ಬಿದ್ದಾಗ, ನಮಗೂ ಏಕಾಂತವಾಸವೇ.

ಏಕೀಕರಣ—ಏಕೆ, ಈ ಕರಣ, ಎಂಬ ಪ್ರಶ್ನೆ.

ಏಣಿ—ತುತ್ತತುದಿಯನ್ನೇರಿ ಸೇರಬೇಕಾದ ಸ್ಥಾನ ಸೇರುತ್ತಲೂ ನಿರ್ದಾಕ್ಷಿಣ್ಯವಾಗಿ ಕೆಳಕೆ ಕೆಡಬೇಕಾದ ಒಂದು ವಸ್ತು, ವ್ಯಕ್ತಿ, ಅಥವಾ ಸಂಸ್ಥೆ.

ಏನಸ್—ಪಾಪ.

ಏರಾವತ—ಬ್ರಾಬಸಾನ್ ಇತ್ಯಾದಿ ಭಾರಿ 'ಪ್ರಯಾಣದ ಏರೋಪ್ಲೇನು.'

ಏಸು—ಏಸು ಹೇಳಿದರೂ ಬುದ್ಧಿ ತಿಳಿಯದು (ಗಾದೆ.)

ಏಳು—ಇದನ್ನು ಹೇಳಲಾರದವರು ಮತ್ತೊಂದನ್ನು ಹೇಳಿಬಿಡುವರು; ಲೆಕ್ಕಕ್ಕೆ ಅದೂ ಒಂದೇ, ಇದೂ ಒಂದೇ.

ಐ

ಐಕ್ಯಮದ್ಯ—ಹೆಂಡಕುಡುಕರ ಗೆಳೆತನ.

ಐಕಿಲ್—ಐಸಿಕಲ್ (ಆಂಗ್ಲ-ಕನ್ನಡ).

ಐತರೇಯ— ಕುಲದವರ ಮಕ್ಕಳು.
ಐಬು—ಇದು ಏನು ಎಂದು ಯಾರಿಗೂ ಗೊತ್ತಾಗಬಾರದು.
ಐಲ್ವಾನ್— ಪೆಚ್ಚು ತಿಂದ ಪೈಲ್ವಾನ್.
ಐರಾವತ—ಆಕಾಶದಿಂದ ಇಳಿದು ಬಂದ ಬಿಳಿ ಆನೆ, ಅರ್ಥಾತ್ ಓಟರುಗಳಿಗೆ ಅಪರಿಚಿತನಾದ ಹುರಿಯಾಳು.
ಐಲು—ಬ್ರಿಟಿಷ್ ಐಲುಗಳು ಎಂಬುದನ್ನು ಗಮನಿಸಿ.
ಐಲುದೊರೆ—ರೂಪಾಯಿ ನೋಟುಗಳನ್ನು ಮೊದಲು ಪ್ರಚಾರಮಾಡಿದವ.
ಐಸ್—ಆಧುನಿಕ ಕವನಗಳನ್ನೋದುವಾಗಲೂ ಅನರ್ಥಕೋಶವನ್ನು ಪಠಿಸುವಾಗಲೂ ತಲೆಯ ಮೇಲಿರಬೇಕಾದ ವಸ್ತು.
ಐಸೆ—ಐಸೆ ಎಂದು ಇಂಗ್ಲಿಷರು ಮಾತ್ರ ಅಲ್ಲ, ಕನ್ನಡಿಗರೂ ಹೇಳುತ್ತಿದ್ದರು, ಹಿಂದೆ.

ಒ

ಒಗ್ಗಟ್ಟು—ಏನೇ ಬರಲಿ, ಒಗ್ಗಟ್ಟಿರಲಿ ಎಂದು ಪ್ರತಿ ಪಾರ್ಟಿಯವರೂ ಎದುರು ಪಾರ್ಟಿಯವರನ್ನು ಎಚ್ಚರಿಸಲು ಕೂಗುವುದು ವಾಡಿಕೆ; ಹೇನೇ ಬರಲಿ, ಎಂದು ಕೂಗುವುದೂ ಉಂಟು.
ಒಗ್ಗರಣೆ—ಉಂಡ ಬಾಯಿಗೆ ಇದೂ ಒಂದು ಉಪಚಾರ.
ಒಂಟೆ—ಅಷ್ಟಾವಕ್ರನಿಗಿದೊಂದು ಉಷ್ಟ್ರಾವಕ್ರ.
ಒಡಕುದನಿ—ಏನೇ ಬರಲಿ ಒಗ್ಗಟ್ಟಿರಲಿ, ಎಂಬ ಕೂಗು.
ಒಡನೋಡಿ—ಕುದುರೆ ಪಂದ್ಯಗಳಲ್ಲಿ ಗೆಲ್ಲುವ ಕುದುರೆಯ ಸ್ಪರ್ಧಿಗಳು.
ಒಡ್ಡ ಜಗನ್ನಾಥ—ಪುರಿಯಲ್ಲಿ ನೆಲೆಸಿರುವ ದೇವರಿಗೆ ಈ ಹೆಸರು ಬಂದು ಬಿಟ್ಟಿದೆ.
ಒಡ್ಡು—ಮೇಳದವಳ್ ಕುಂಕುಮವಾರಿ ಪೊಯ್ಯುವ ರೀತಿ: "ಒಡ್ಡೊಡ್ಡೊಡ್ಡೊಡ್ಡನೆ ಮೇಳದವಳ್....ಕುಂಕುಮವಾರಿ" ಇತ್ಯಾದಿ.
ಒಡೆಯದ ಸ್ಲೇಟು—ಸ್ಲೇಟು ಒಡೆಯದಿದ್ದರೂ ಸಹಪಾಠಿಗಳ ತಲೆ ಒಡೆಯುತ್ತದೆ, ಎಂಬುದನ್ನು ತಂದೆ-ತಾಯಿಗಳು ಅರಿತರೊಳ್ಳಿತು.
ಒಣಮಾಲಿ—ಒಣಗಿದ ಮಾಲೆಯನ್ನು ಧರಿಸುವವ, ಭಾಷಣಕೊಡಲು ಪೊತ್ತು ಮೀರಿ ಬಂದವ.

ಒಣಪಶು—ಪಂಕದಲಿ ಬಿದ್ದರೆ, ತಂಪನ್ನು ಅನುಭವಿಸುತ್ತದೆ.

ಒತ್ತಾಯ—ಹುಟ್ಟಿದ ಮೇಲೆ, ಶ್ರಮ ಎಂಬುದು ಒತ್ತಾಯವೇ.

ಒದ್ದೆಮಾಡುವುದು—ಸ್ನಾನಮಾಡುವುದು.

ಒಂದ್ರಜಿತ್—ಒಂದು ಜಯವನ್ನು ಪಡೆದವನು; ಪರೀಕ್ಷೆಯಲ್ಲಿ ಒಂದು ಪಾರ್ಟಲ್ಲಿ ಮಾತ್ರ ಗೆದ್ದವನು.

ಒಂದೇಕಡೆ—ಪತ್ರಿಕೆಗಳಿಗೆ ಲೇಖನಗಳನ್ನು ಬರೆಯುವಾಗ, ಕಾಗದದ ಒಂದೇ ಕಡೆ ಬರೆಯಬೇಕೆನ್ನುತ್ತಾರೆ. ಕೆಲವರು ಒಂದು ಕಡೆಯೂ ಬರೆಯದಿದ್ದರೆ ಚೆನ್ನ.

ಒಪ್ಪಿಗ—ಅಂಪೈರ್ ಮಹಾಶಯ; ಹೌಸ್ದಾಟ್ ಎಂಬ ಕೂಗಿಗೆ ಅವನು ಓ ಕೊಡುವುದಗತ್ಯ.

ಒಬ್ಬಟ್ಟು—ಅನೇಕರು ಹೆಬ್ಬೆಟ್ಟೊತ್ತಿ ಸಾಲ ತಂದು ಒಬ್ಬಟ್ಟು ತಿನ್ನುವುದುಂಟು.

ಒಮ್ಮುಖ—ಜಿಪುಣರ ಕಿಸೆಯಲ್ಲಿ ಕಾಸಿನ ದಾರಿ; ಒಮ್ಮುಖ ಸಂಚಾರವಿರುವ ರಸ್ತೆಗಳಲ್ಲಿ ಲಾರಿ ಮುಂತಾದುವು ನಮ್ಮನ್ನು ಎಲ್ಲಿ ತಾಕುತ್ತವೆ ಎಂಬುದನ್ನು ನಾವು ಅರಿತುಕೊಳ್ಳಬಹುದು, ಅದೇ ಅದರ ಅನುಕೂಲ.

ಒಲುಮೆ—ಒಲುಮೆಯಿಂದ ದೃಷ್ಟಿಮಾಂದ್ಯ ತಗಲುವುದರಿಂದ, ಲೋಕಕ್ಕೆ ಕ್ಷೇಮ.

ಒರಳು—"ಕೊರಳ ಸತ್ವವಿಲ್ಲದೆ, ಒರಳ ನುಂಗಿದರ್ ಹಲವು ಪೆಂಗರ್," ಎಂದು ನಯಸೇನ ಹೇಳುತ್ತಾನೆ.

ಒಲ್ಲ—ಒಲ್ಲ! ಏಕೊಲ್ಲ? ಇಲ್ಲ; ಆದಕ್ಕೊಲ್ಲ.

ಒಲೆ—ಮಡದ ತಂದದ್ದನ್ನೆಲ್ಲ ಮಡದಿ ಹಾಳುಮಾಡುವ ಜಾಗ.

ಒಸಿಕಾಣಿಕೆ—ಮಸಿಕಾಣಿಕೆ ಎಂದು ರೈತರಿಂದ ಒಸಿಕಾಣಿಕೆ ತೆಗೆದುಕೊಳ್ಳುವರು, ಹಳ್ಳಿಗಳಲ್ಲಿ.

ಒಳ್ಳೆಯ ನಡತೆ—ಉದಾಹರಣೆಯ ಸಹಾಯವಿಲ್ಲದೆ ಮಕ್ಕಳು ಕಲಿಯಬೇಕಾಗಿ ಬಂದಿರುವ ಒಂದು ರೀತಿಯ ನಡತೆ.

ಒಳ್ಳೆಯವರು—ಮಾವನ ಮನೆಯವರು.

## ಓ

ಓ—ಇಂಗ್ಲೀಷಿನಲ್ಲಿ ಓಕೊಡು ಎಂದರೆ ಸೊನ್ನೆಯನ್ನು ಕೊಡು, ಎಂದರ್ಥ.

ಓಕುಳಿ—'ಕಣ್ಣೀರು ರಮಣೀಯವಾಯ್ತು,' ನಮ್ಮ ಕಡೆಯವರು ಜಯ ಗಳಿಸುವಾಗ.

ಓಕೆ—ಸರಿ, ಎನ್ನುವುದಕ್ಕೆ ಬದಲಾಗಿ ಈ ಮಾತನ್ನೇ ವಿದ್ಯಾವಂತರು ಹೇಳುತ್ತಿರುವುದನ್ನು ನಾವು ಕೇಳಬಹುದು.

ಓಟ—ನೆಗಡಿಗಿಂತ ವೇಗವಾಗಿ ಯಾವ ಮನುಷ್ಯನಿಗೂ ಓಡಲಾಗುವುದಿಲ್ಲ. ಏಕೆಂದರೆ, ಎಂಥ ಓಟಗಾರನನ್ನೂ ನೆಗಡಿ ಹಿಡಿದು ಬಿಡುತ್ತದೆ.

ಓಟು—ಐದು ವರ್ಷಕ್ಕೊಮ್ಮೆ ಘನವಾಗುವ ಒಂದು ವಸ್ತು ; ದೇಶದ್ರೋಹವೆಸಗಲು ನಮ್ಮ ಕೈಗೆ ಬಂದಿರುವ ಒಂದು ಅಸ್ತ್ರ.

ಓಟ್ಸ್—ಇಂಗ್ಲಂಡದಲ್ಲಿ ಕುದುರೆಗಳೂ ಸ್ಕಾಟ್ಲೆಂಡಿನಲ್ಲಿ ಮನುಷ್ಯರೂ ತಿನ್ನುವ ಒಂದು ಧಾನ್ಯ; ಆದ್ದರಿಂದಲೇ ಇಂಗ್ಲೀಷ್ ಕುದುರೆಗಳೂ ಸ್ಕಾಟ್ಲೆಂಡಿನ ಮನುಷ್ಯರೂ ತುಂಬಾ ಜಾಣರಾಗಿರುವುದು.

ಓತಿಕ್ಯಾತ—ಬಣ್ಣ ಬದಲಾಯಿಸಿ ಬದುಕಲು ಯತ್ನಿಸುವ ಮನುಷ್ಯ.

ಓದಾಟ—ಹಾರವರ ಓದಾಟ ಸಾಲಬೋನದ ಊಟ; ಕ್ಷತ್ರಿಯರ ಓದಾಟ ಕತ್ತಿಕಡಿದಾಟ; ವೈಶ್ಯರ ಓದಾಟ ಲೆಕ್ಕದಲ್ಲಿ ಕಿತ್ತಾಟ.

ಓದಾಳಿ—ಗ್ರಂಥಕೀಟ.

ಓದು—ಓನಾಮದಿಂದ ಹಿಡಿದು ದುಃಖದ ವರೆಗೆ.

ಓನಾಮ—ಹಣೆಗೆ ನಾಮ ಬೀಳುತ್ತಲೂ ಒಬ್ಬ ಕೂಗಿದ್ದು—'ಓ, ನಾಮ !' ಎಂದು.

ಓಬೀರಾಯ—ಹಳೆಯ ಕಂದಾಚಾರಗಳನ್ನೆಲ್ಲ ರೂಢಿಸಿದ ಒಬ್ಬ ರಾಜ.

ಓರಗಿತ್ತಿ—ಸಂಸಾರದಲ್ಲಿನ ಪಂಚಾಂಗಿ.

ಓಲ್ಡಾಲು—ಹರಕು ಹೋಲ್ಡಾಲು.

ಓಲೆ—ಮೂರು ದಿನದ (ಈ) ಬಾಳಿಗೆ ಆರು ಜೊತೆ ಓಲೆ, ಎಂಬುದೇ ಗಾದೆ; ಓಲೆಯ ಸುರುಳಿಯಿಂದ ವಜ್ರದ 'ಬೆಂಡೋಲೆ'ಯ ವರೆಗೆ ಕರ್ಣಾಭರಣಗಳಿಗೆಲ್ಲ ಇದೇ ಹೆಸರು.

ಓಂ—ಅನಾದಿ ಭಾರತೀಯನ ಆದ್ಯ ತೇಗು.

## ಔ

ಔಟ್—ಮನೆಯೊಳಗಿದ್ದುಕೊಂಡೇ ಇಲ್ಲವೆನಿಸಲು ಈ ಬೋರ್ಡನ್ನು ಹೊರಗೆ ಹಾಕಿದರಾಯಿತು.

ಔಲೂಕ—ಇಂಗ್ಲೀಷಿನ ಔಲು.

ಔಷಧಿ—ಡಾಕ್ಟರುಗಳ ರಂಗೋದಕ.

## ಅಂ

ಅಂಕಿಅಂಶ—ಲೆಕ್ಕಾಚಾರವಾಗಿ ಸುಳ್ಳು ಹೇಳುವ ಆಧುನಿಕ ಪದ್ಧತಿ.

ಅಂಗಡಿ—ಅನೇಕ ಗುಡಿಗಳು.

ಅಂಗ್ರೇಜಿ—ಇಂಗ್ಲೀಷರ ಭಾಷೆ ; ಜಿ, ಎಂಬುದು ಬಹುಮಾನ ಸೂಚಕ.

ಅಂಚೆ—ದಮಯಂತಿ ಪ್ರಾರಂಭಿಸಿದ ಡಾಕ್ ಪದ್ಧತಿ.

ಅಂಟುಮೌಢ್ಯ—ಅಂಟುಜಾಡ್ಯದಂತೆ, ಮೌಢ್ಯವೂ ಒಂದು ಅಂಟುರೋಗ.

ಅಂತರ್ಧಾನ—ಕಾರಾಗೃಹಕ್ಕೆ ಹೆದರಿ ಗುಪ್ತವಾಗಿ ತಿರುಗಾಡುವ ವಿಧಾನ.

ಅಂತರ್ದಾನ—ಗುಪ್ತದಾನ.

ಅಂತರ್ಯಾಮಿ— ಒಳಗೊಳಗೆ ಸೇರಿಕೊಂಡು ಪ್ರಚಾರ ನಡೆಸುವವ.

ಅಂತಸ್ತು—ಹಾಗೆಯೇ ಆಗಲಿ, ಎಂದು ಹೇಳುವುದೇ ಇದು ಇರುವವರನ್ನು ಪ್ರೀತಿಸಲು ಉಪಾಯ.

ಅಂತು—ಅಂತು ಇಂತು ಕುಂತಿ ಮಕ್ಕಳಿಗೆ ರಾಜ್ಯ ಬಂತು.

ಅಂದಹಾಸ—ನಕ್ಕಾಗಲೂ ಮುಖದ ಅಂದ ಕೆಡದೆ ನಗುವ ಅಂದಹಾಸದವರು ಕಡಮೆ, ಜಗತ್ತಿನಲ್ಲಿ.

ಅಂದ್ರೆ—ಆಕೆ ಅಂದ್ರೆ ಅಂದ್ರೆ ಈತನಿಗೆ ಇಂದ್ರಲೋಕ (ಗಾದೆ).

ಅಂಧರ್ವರು—ಕುರುಡು ಸಂಗೀತಕಾರರು.

ಅಂಬಟ್ಟನ್‌ಬ್ರಿಡ್ಜ್—ಹ್ಯಾಮಿಲ್‌ಟನ್ ಎಂಬ ಮದ್ರಾಸ್ ಗವರ್ನರ್ ಪ್ರಾರಂಭೋತ್ಸವ ನೆರವೇರಿಸಿದ ಬ್ರಿಡ್ಜ್ ಅಥವಾ ಸೇತುವೆಯ ಹೆಸರು ಅಂಬಟ್ಟನ್ ಬ್ರಿಡ್ಜ್ ಎಂಬ ರೂಪಾಂತರಹೊಂದಿ, ಅಂಬಟ್ಟನ್ (ಬಾರ್ಬರ್) ಬ್ರಿಡ್ಜ್ ಆಗಿ ಅಂಬಟ್ಟನ್= ಕ್ಷೌರಕ= ಬಾರ್ಬರ್ಸ್ (ಇಂ) ಬ್ರಿಡ್ಜಾಗಿದೆ. ಕೀರ್ತಿಲಕ್ಷ್ಮಿ ಚಂಚಲೆ ಎನ್ನುವುದಕ್ಕೆ ಒಳ್ಳೆ ಉದಾಹರಣೆ.

ಅಂಬರೇಷನ್— ಹರಿವಾಸರಕ್ಕೆ ಕೊಡುವಷ್ಟು ಅಲ್ಪ ರೇಷನ್.
ಅಂಬೆಗೋಲು—ಮುದಿತನದಲ್ಲಿ ಹಿಡಿಯಬೇಕಾದ ಊರುಗೋಲು.

ಕ

ಕಕ್ಕಾನ್ನ—ಬಾಯಿಗೆ ಹಾಕಿದ ಕೂಡಲೇ ಕಕ್ಕಬೇಕಾಗಿ ಬರುವ ಅನ್ನ; ಅನ್ಯಾಯವಾಗಿ ತಿಂದ ಅನ್ನ, ಯಾವತ್ತಾದರೂ ಕಕ್ಕಲೇ ಬೇಕಾದದ್ದು.
ಕಂಕಣ—ಇದನ್ನು ತೊಟ್ಟೆನೆಂದರೆ ಸಾಕು, ಜನಕ್ಕೆ ನಂಬಿಕೆಯುಂಟಾಗುತ್ತದೆ.
ಕಂಕಾಲ— ಕಂಗಾಲಾದವನು.
ಕಗ್ಗ—ಎಲ್ಲ ಕಗ್ಗವ ಗೀಚಿ, ಕನ್ನಡಂ ಗೆಲ್ಲೆಂದು, ಮೆಲ್ಲನೇ ಪದದಲ್ಲಿಡುವಾತ ಸಿಂಹಕ್ಕೆ ಹುಲ್ಲು ಕೊಟ್ಟಂತೆ, ಸರ್ವಜ್ಞ.
ಕಂಗಾರು—ಕೂತು ಕೂಸಿಪ್ಪ ಚೀಲಂ ಉಳ್ಳ ಪ್ರಾಣಿ.
ಕಚೇಲ—ಕುಚೇಲನ ಗ್ರಂಥಕ್ಕೆ ಇದೇ ರಕ್ಷಾಪತ್ರ.
ಕಂಚುಕಂಠಿ—ಕಂಚಿನಂಥ ಶಾರೀರ.
ಕಜ್ಜಿ—ಲಜ್ಜೆಯನ್ನು ಹೋಗಲಾಡಿಸಲು ಒಂದು ಉಪಾಯ.
ಕಟ್ಟುತಿಕ್ತ— ಹಲವು ಆಧುನಿಕ ಕಾದಂಬರಿಗಳು.
ಕಟ್ಟುಕತೆ— ಕಂತೆ ಕಂತೆಯಂತೆ ಕಟ್ಟಿದ ಕತೆ.
ಕಟ್ವಾಂಗ—ಕತ್ತರಿಸಲು ಉಪಯೋಗಿಸುವ ಅಂಗ.
ಕಂಟ್ರೋಲ್—ಹೇರಳವಾಗಿ ದೊರೆಯುವ ಪದಾರ್ಥಗಳನ್ನು ಕಣ್ಮರೆ ಮಾಡಲು ಉಪಾಯ.
ಕಂಠ—ಕವಿಗಳು ಶಂಖಕ್ಕೆ ಹೋಲಿಸುವುದಕ್ಕಾಗಿಯೇ, ಇದರಿಂದ ಅನೇಕರು ಶಂಖವಾದ್ಯ ಮಾಡುವರು.
ಕಂಠಕ—ಮುಳ್ಳುಮಾತು.
ಕಂಠಲತಾ—ಕಾಲರ್.
ಕಂಠಾಘೋಷ—ಬರಿಯ ಕೂಗು.
ಕಂಠಶೋಷಣೆ—ಓಟರುಗಳನ್ನು ಕತ್ತು ಹಿಡಿದು ಪೋಲಿಂಗ್ ಬೂತಿಗೆ ದಬ್ಬಲು ಇದು ಬೇಕೇ ಬೇಕು.
ಕಡ—ಕಡ ಸಿಕ್ಕುವ ಹಾಗಿದ್ದರೆ, ನಾನೂ ಕೊಂಚ ಬಡಕೊಂಡೇನು (ಗಾದೆ).

ಕಡಗಣ್ಣು—ಸಾಲ ಕೇಳುವುದಕ್ಕೆ ಬರುವವನ ದೃಷ್ಟಿದೇಶಾವರ.

ಕಡತ್ರ—ಕಡತಂದು ತೆರತೆತ್ತು ಪಡೆದ ಮಡದಿ.

ಕಡಪಾಯಿ—ಸಾಲದಲ್ಲಿ ಮುಳುಗಿರುವ ಬಡಪಾಯಿ.

ಕಡಲೆ—ಹಲ್ಲಿದ್ದಾಗ ಸಿಗದ ಪದಾರ್ಥ.

ಕಡಸಾಲೆ— ಲೇವಾದೇವಿ ಮಾಡುವುದಕ್ಕಾಗಿ ಪ್ರತ್ಯೇಕ ಕಟ್ಟಿರುವ ಜಾಗ.

ಕಡಹಾಯಿಸು—ಸಾಲ ತೀರಿಸು.

ಕಡಾವಣೆ—ಹೌಸ್ ಬಿಲ್ಡಿಂಗ್ ಸೊಸೈಟಿಗಳಿಂದ ಸಾಲ ತಂದು ಸಾಲಾಗಿ ಮನೆ ಕಟ್ಟಿರುವ ಪ್ರದೇಶ.

ಕಡಾಕ್ಷ—ಸಾಲ ಕೇಳಲು ಬರುವವನ ದೈನ್ಯದೃಷ್ಟಿ.

ಕಡಿವಾಣ— ಕಡಲೆಗೆ ಆಸೆಪಟ್ಟು ಬಾಯಿ ತೆರೆದರೆ, ಕಡಿವಾಣಕ್ಕೂ ತೆರೆಯ-ಬೇಕಾಗುತ್ತದೆ.

ಕಡುಕೋಪ—ಕಡುಕೋಪ ಬಂದಾಗ ತಡಕೊಳ್ಳುವನೇ ಜಾಣ (ಗಾದೆ) ಆದರೆ, ಹಾಳು ಆ ತಡ ಎಲ್ಲಿ ಸಿಗುತ್ತದೆ ಎಂದು ಆ ಸಮಯದಲ್ಲಿ ಹೊಳೆಯು ವುದೇ ಇಲ್ಲ.

ಕಡುಬೀರು— ದಾಂಡಿಗನ ಮೈಗೆ ಬಿದ್ದು ಗಾಯವಾಗುವಂತೆ ಬೌಲು ಮಾಡು ವಿಕೆ.

ಕಡುಬು— ಬೊಗಳುವವರನ್ನು ಇದರಿಂದ ಸಮಾಧಾನಪಡಿಸಬಹುದಂತೆ....

ಅಂದಮೇಲೆ, ಇದಕ್ಕೆ ನಾನಾರ್ಥಗಳಿವೆ ಎಂದ ಹಾಗಾಯಿತು.

ಕಡುನುಡಿ—ಇಲ್ಲ, ಎಂಬ ನುಡಿ.

ಕಡೆಯದಾಗಿ—ಸಭಿಕರಿಗೆ ಬೇಜಾರಾಗಿದೆ ಎಂದು ತಿಳಿದಾಗ, ಉಪನ್ಯಾಸಕರು ಈ ಪದವನ್ನು ಪ್ರಯೋಗಿಸಿ ಅವರ ಮುಖದಲ್ಲಿ ಗೆಲುವನ್ನೂ ಸಮಾ ಧಾನವನ್ನೂ ಮತ್ತೆ ಮತ್ತೆ ಅರಳಿಸುವರು.

ಕಂಡಿ—ಹೊಸ ಪೀಡೆ ಮತ್ತೆ ನುಗ್ಗಿ ಬರುವ ಜಾಗ.

ಕಣ್ಣಡಕ—ಮದವೆಂಬ ಗಾಜಿಂದ ಮಾಡಿದ ಒಂದು ಉಪನಯನ.

ಕಣ್ಣು—ಕಾಮಕ್ಕೆ ಕಣ್ಣಿಲ್ಲ, ಸರಿ! ಆದರೆ, ಪಕ್ಕದ ಮನೆಯವರಿಗಿದೆ, ನೆನಪಿ-ರಲಿ. 'ನಡುವಣ ಕರ್ಪೂರಂ ಕಡೆಯಣ ಕಡುಪೆಳ್ಪುಂ ತುದಿಯ ಕೂರ್ಪುಂ'

ಇರುವ ಅಂಗವಿಶೇಷ; ಕೆಲವರ ಕಣ್ಣು, ಹನಿಕೂಡಿದ ಹಳ್ಳ. ಕಣ್ಣು ಕೊಟ್ಟ ದೇವರು ಕೆಡಿಸಿಕೊ ಅಂದನೇ ? (ಗಾದೆ).

ಕಣ್ವಂತರಿ—ನೇತ್ರವೈದ್ಯ.

ಕರ್ಣಕಸಾಯುನ— ಕೆಲವರ ಗಾನ; ಹಿತನುಡಿ.

ಕರ್ಣಕಠೋರ—ಹಾರ್ಮೋನಿಯಂ.

ಕರ್ಣಕುಠಾರ—ಕರ್ಣಕಠೋರವನ್ನೇ ನೋಡಿ.

ಕರ್ಣಭಾರ—ಲೋಲಕ್ಕು.

ಕರ್ಣಮಂತ್ರ— ಚಾಡಿ.

ಕರ್ಣರಸಾಯುನ—ಆಕೆಯ ಮೊತ್ತಮೊದಲ ಮಾತುಗಳು ಮಾತ್ರ; ಚಾಡಿ.

ಕರ್ಣಾರ್ಜುನ—ಹುಟ್ಟುತ್ತ ಅಣ್ಣ-ತಮ್ಮ; ಬೆಳೆಯುತ್ತ ಕರ್ಣಾರ್ಜುನ.

ಕರ್ಣಾಟ— ಯುದ್ಧತಂತ್ರೀ ಚತುರಮತಿ....ಉದಾ: ಕಾರಿಯಪ್ಪ.

ಕರ್ಣಾಟಕ—ನ-ಣ ಕಲಹನಾಟಕ ರಂಗಸ್ಥಳ; ಕರ್ಣನ ಆಟದ ಬಯಲು.

ಕರ್ಣಾಟಕಲಹ— ಶೂದ್ರಕ ಕವಿಯ ಕಾಲದಲ್ಲೂ ಕರ್ನಾಟ-ಕರ್ಣಾಟಕಲಹ ಇತ್ತೆಂಬುದಕ್ಕೆ ಆ ಕವಿ ಈ ಮಾತನ್ನುಪಯೋಗಿಸಿರುವುದೇ ನಿದರ್ಶನ.

ಕತ್ತಲು—ಸಿನಿಮ ಮಂದಿರಗಳಲ್ಲಿ ಸಿಗುವ ಅನುಕೂಲ; ಕಾಳಸಂತೆ ಕೂಡುವ ಸ್ಥಳ; ಕುರೂಪಿಗಳ ಕಾಮಧೇನು.

ಕತ್ತಲೆ—ಎಲ್ಲ ದೀಪದ ಬುಡದಲ್ಲೂ ಇರುವ ಪರಿಸ್ಥಿತಿ; ಮಹನೀಯರನ್ನು ಎಡೆಬಿಡದೆ ಅನುಸರಿಸುವ ಹಿಂಬಾಲಿಗರು ಅವರ ನೆರಳನ್ನೇ ಕತ್ತಲೆಯಾಗಿ ಆಳವಡಿಸಿಕೊಳ್ಳುತ್ತಾರೆ.

ಕರ್ತವ್ಯ—ಇದನ್ನು ನೆರವೇರಿಸಿದರೆ ಸಾಕು; ಎಲ್ಲರೂ ವಂದನಾರ್ಹರು.

ಕತ್ತೀಮತ—ಕತ್ತಿಯಿಂದ ಪ್ರಚಾರಮಾಡುವ ತತ್ವ ಸಮೂಹ.

ಕತ್ತುರಿ—ನಿಜ ಹೇಳಿದರೆ ನಿಷ್ಠೂರ, ಕತೆ ಹೇಳಿದರೆ ಕತ್ತುರಿ (ಗಾದೆ).

ಕತೆ—ಕತೆಗೆ ಕಾಲಿಲ್ಲ, ಕೇನಿಗೆ ಕಾಲದ ಮಿತಿ ಇಲ್ಲ (ಗಾದೆ).

ಕತೆಗಾರ—ಕಟ್ಟು ಏನೊಂದೂ ಇಲ್ಲದೆ ಕಟ್ಟಡ ಬಯಸುವವರು.

ಕತ್ತೆ—ಅಶ್ವಮೇಧವನ್ನು ತಪ್ಪಿಸಿಕೊಳ್ಳಲು ಕುದುರೆ ಎತ್ತಿದ ಅವತಾರ; ನಮ್ಮ ಮಕ್ಕಳನ್ನು ಮುದ್ದಿಸುವಾಗ ನಾವು ಈ ಪದವನ್ನುಪಯೋಗಿಸಿ, ಆ ಸಾಧು ಪ್ರಾಣಿಗೆ ಅಪಮಾನಮಾಡುತ್ತಿದ್ದೇವೆ; ಕತ್ತೆ ಎಂದು ಮಗುವನ್ನು

ಬೈಯುವಾಗ, ಅದು ಅಪ್ಪಾ ಎಂದು ನಮ್ಮನ್ನೇ ಬೈಯುತ್ತದೆ; ಕತ್ತೆ, ಕುದುರೆಯ ಸೋದರಮಾವನೆಂದು ಹೇಳಿಕೊಳ್ಳುತ್ತದೆ, ನಂಬುವರಾರು ? 'ಕತ್ತೆ ಮಣಾಳ ಮಚ್ಚಂ ಸಚ್ಚಂ'.

ಕಂತ್ರೀವಾದ್ಯ— ಅಪರಿಷ್ಕೃತರು ಉಪಯೋಗಿಸುವ ಒಂದು ತಂತ್ರೀವಾದ್ಯ.

ಕಂತುವರಾಳಿ— ಕಂತು ಕಂತಾಗಿ ಸಾಲ ತೀರಿಸಬೇಕಾಗಿ ಬಂದಾಗ ನಾವು ಎಳೆಯುವ ರಾಗ.

ಕದನಕುತೂಹಲ— ಜಗಳವಾಡಲು ಕಾಲುಕೆರೆದು ಬರುವ ಪಕ್ಷ ಪ್ರತಿಪಕ್ಷಗಳು.

ಕದನಪ್ರಸಂಗ—"ಶೀತಳಯುದ್ಧ" ಪರಿಸ್ಥಿತಿ.

ಕದನ್ನಪ್ರಸಂಗ— ಹೋಟಲೂಟ.

ಕಂದಮೂಲ— ಬೀದಿ ಜಗಳಗಳೆಲ್ಲ ಕಂದರಿಂದಲೇ ಪ್ರಾರಂಭ.

ಕದಾಕಿಟಿಕಿ— ತುತ್ತತುದಿಗೆ ಬಂದಾಗ, ಬಾಡಿಗೆದಾರರು ಉಪಯೋಗಿಸುವ ಇಂಧನ.

ಕನಸುಮ— ಮನಸ್ಸಿನಲ್ಲಿ ನಾವು ಮುಡಿದು ಮೆರೆಯುವ ಹೂವು.

ಕನವರಸೇಷನ್— ಇಂಗ್ಲೀಷಿನಲ್ಲೂ ಇದೇ ಮಾತಿದೆ.

ಕನ್ನ— ಕಾನೂನುಬದ್ಧವಲ್ಲದ ಸಂಪಾದನೆ.

ಕನ್ನಡಕ— ಕನ್ನಡಕದ ವ್ಯಾಪಾರಿಗಳು ನಮ್ಮ ಮೂಗಿಗೇರಿಸುವ ವಸ್ತು.

ಕನ್ನಡಂ— ಕನ್ನಡಂ ಕತ್ತುರಿಯಲ್ತೆ ? ಎಂಬ ಪ್ರಶ್ನೆಗೆ ಅನೇಕರು ಹೌದೆನ್ನುತ್ತಾರೆ; "ಸುಲಿದ ಬಾಳೆಯ ಹಣ್ಣಿನಂದದಿ ಸುಲಭ"......ಆದರೆ, ಕಾಯಲ್ಲೇ ಹಲವರು ಸುಲಿದು ಮಾರುತ್ತಾರೆ.

ಕನ್ನಡಿ— ಮೂಕೊರೆಯಂಗೆ ತೋರಿಸಬಾರದ ವಸ್ತು; ಇದರಲ್ಲಿ ಪ್ರತಿಬಿಂಬವನ್ನು ನೋಡಿದ ಮೇಲೂ ಡಾರ್ವಿನ್ ತತ್ವವನ್ನೊಪ್ಪದವರು ಅತಿ ವಿರಳ; ಕರತಲದ ಕಜ್ಜಿಗೆ ಕನ್ನಡಿ ಏಕೆ ? (ಗಾದೆ).

ಕನ್ನಡಿಗರು— ಕುಳಿತೋದದೆಯುಂ ಪರಿಣತಮತಿಗಳ್....ಇದನ್ನು ನಂಬಿರುವುದರಿಂದಲೇ ಕನ್ನಡ ನಾಡಿನಲ್ಲಿ ಅಕ್ಷರಸ್ಥರ ಸಂಖ್ಯೆ ಶೇಕಡ ೧೨ ಆಗಿರುವುದು.

ಕನ್ನಡವಕ್ಕಿ— ಗಿಳಿ; ಅದಕ್ಕೆ ಕನ್ನಡವಕ್ಕಿ ಎಂದು ಹೆಸರು ಬಂದಿರುವುದು. ನಾವು ಗಿಳಿಪಾಠ ಹೇಳುವುದರಿಂದಿರಬಹುದೆ ?

ಕನ್ನಾಹ— ಕನ್ನ ಹೊಡೆಯಲು ಪಿತೂರಿ; ಸಿನಿಮಾ ಚಿತ್ರದ ತಯಾರಿಕೆ.

ಕನ್ಯಾಕುಬ್ಜ—ಕುಳ್ಳು ಹುಡುಗಿ; ಪಿಗ್ಮಿಮಹಿಳೆ.

ಕನ್ಯಾರ್ಥಿ—ಕಾಲೇಜು ವಿದ್ಯಾರ್ಥಿ; ತನಗಿಂತ ಹೆಚ್ಚು ಸೌಂದರ್ಯ, ಕಡಮೆ ವಿದ್ಯೆ ಇರುವ ಹೆಣ್ಣನ್ನೇ ಹುಡುಕುವವ.

ಕನ್ನೆ—"ಕನ್ನೆಯನು ಕೈಹಿಡಿದು ವಿದ್ಯೆಗೆ ಸೊನ್ನೆಯಾಯಿತ್ತಿತ್ತಲವನಿಗೆ;" ಮೃದುಪದವಿನ್ಯಾಸವಿಲಾಸಾಲಂಕರಣದಿಂದ ಕೂಡಿದವಳು.

ಕನ್ಯೋನ್ಯ—ಕನ್ಯೆಯೂ ಕುವರನೂ ಅನ್ಯೋನ್ಯವಾಗಿರುವಿಕೆ.

ಕಪಟ—ರಾಜಕೀಯ ಚುನಾವಣೆಗಳಲ್ಲಿ ಎದುರು ಪಕ್ಷದವರು ಆಚರಿಸುವ ನೀತಿ.

ಕಪಟನಾಟಕ—ರಾಜಕೀಯದ ಬಹುಭಾಗ.

ಕಪಾಟಸಂಧಿ—ಲೆಕ್ಕಕ್ಕೆ ಮಾತ್ರ.

ಕಂಪನೀಪ್ರತಾಪಮಂಡನ—ಸಂಸ್ಕೃತ ರಾಜಕೀಯ ನಾಟಕ; ಸಿಪಾಯಿ ದಂಗೆಯ ಕಾಲದಲ್ಲಿ ಬರೆದದ್ದು. ಬಿಂದುಮಾಧವ ಎಂಬ ಸಿಪಾಯಿ ಇರಬಹುದು.

ಕಪಿ—ಏನು ಮಾಡುವುದೆಂದು ತೋಚದಾಗ ನಾವು ತಲೆ ಕೆರೆದುಕೊಳ್ಳುತ್ತೇವಲ್ಲಾ, ಆದರಿಂದಲೇ ನಿರ್ಧರಿಸಬಹುದಂತೆ ನಾವು ಕಪಿ ಸಂತತಿ ಎಂಬುದನ್ನು; ಇದನ್ನು ಕೇಳಿದಾಗ, ಮೈಪರಚಿಕೊಳ್ಳಬೇಕೆನ್ನುತ್ತದೆಯಲ್ಲವೆ?

ಕಪಿಸ್ಥಲ—ಟೊಂಗೆ.

ಕರ್ಪೂರೋತ್ಸವ—ಮಂಗಳಾರತಿ.

ಕಫಶ್ಚರಣ—ಗೊರಲು.

ಕಬಳಗ—ಕಬಳ ಹೊಡೆಯುವುದಕ್ಕೆ ಮಾತ್ರ ಬರುವ ಬಳಗ.

ಕಂಬ—ಕೆಲಸವಿಲ್ಲದಾಗ ಸುತ್ತಲು ಒದಗುವ ವಸ್ತು.

ಕಂಬನಿ—ಲೋಕದಲ್ಲೆಲ್ಲ ಅತ್ಯಂತ ಪ್ರಭಾವಶಾಲಿಯಾದ ಜಲಪಾತ.

ಕಮಲ—ಇದನ್ನು ಪಡೆಯಲು ಹೋದ ಅನೇಕ ತರುಣರು ನೀರಲ್ಲಿ ಮುಳುಗಿ ಸತ್ತಿದ್ದಾರೆ.

ಕರ್ಮ—ನಮ್ಮ ಬೆನ್ನು ಹತ್ತಿರವುದೆಲ್ಲ.

ಕರಗ್ರಾಹಿನ್—ಆಳಿಯ; ಕರ ವಸೂಲು ಮಾಡುವವ, ಮಾವನಿಂದ.

ಕರಭಾರ—ಕರಗಳನ್ನು ಹೇರಿದರೆ ಹೀಗಾಗುವುದುಂಟು.

ಕರಚ್ಚಂದ್ರಘೋಷ—ಚಂದ್ರನನ್ನು ಹಿಡಿದು ಕೈಗೆ ಕೊಡು, ಎಂದು ಮಗು ಅಳುವುದು.

ಕರಟಕ—ಸಾಲದಲ್ಲಿ ಮುಳುಗಿ ದಾರಿಕಾಣದೆ, ಕಂಡವರ ಮೇಲೆ ಪಿತೂರಿ ಹೂಡುವವ.

ಕರಡಿ—ಶಿವಪೂಜೆಯನ್ನು ಕೆಡಿಸಲು ಶಿವದ್ವೇಷಿಗಳು ಒಳನೂಕುವ ಪ್ರಾಣಿ; ರಷ್ಯದಲ್ಲಿ ಕರಡಿಗಳು ಬಹಳವಂತೆ.

ಕರತಲಾಮಲ—ಲಂಚ.

ಕರಿ—'ಕರಿ ಕನ್ನಡಿಯೊಳಗಡಗುಂ,' ಅದೇ ಸೋಜಿಗ.

ಕರಿವದನ—ವಿದ್ಯಾಗಣಪತಿ; ಆದ್ದರಿಂದಲೇ ಪದವೀದಾನಸಮಾರಂಭಕ್ಕೆ ಡಿಗ್ರಿದಾರರೆಲ್ಲರೂ ಕರೀಗೌನು, ಕರೀಹುಡ್ಡು ಧರಿಸಿ ಬರುವುದು.

ಕರೀಕುರಿ—ನಂಬಲರ್ಹನಲ್ಲದವ.

ಕರೀಸೋಮವಾರ–ರಜ ಮುಗಿದು ಶಾಲಾಕಾಲೇಜುಗಳು ತೆರೆದು ಮತ್ತೆ ಪಾಠ-ಪ್ರವಚನಗಳು ಪ್ರಾರಂಭಿಸುವ ಸೋಮವಾರ.

ಕರುಣೆ—ನಮ್ಮ ಭಾಗ್ಯವನ್ನು ಇತರರ ಮುಂದೊಡ್ಡಲು ಒಂದು ಅವಸರ.

ಕರುಣಾಸ್ತ್ರ—ಕರುಣೆಯ ಪ್ರಕಟಣೆಯಿಂದಲೇ ವಿರೋಧಿಗಳನ್ನು ಗೆಲ್ಲುವ ಬಗೆ.

ಕುರುಬು—ಕರುಬಿದವರ ಮನೆ ಬರಿದು.

ಕರುಳು—ಕರುಳಲ್ಲಿ ಕತ್ತರಿ, ಬಾಯಲ್ಲಿ ಕತ್ತುರಿ (ಗಾದೆ).

ಕಲಹಹಂಸೆ—ಒಂದು ಬಗೆಯ ಸ್ತ್ರೀ.

ಕಲ್ಪನಾಶಕ್ತಿ—ಸುಳ್ಳಿನ ಕಟ್ಟಡವನ್ನು ಕಟ್ಟುವ ಜಾಣತನ; ರವಿ ಕಾಣದ್ದನ್ನು ಕಾಣಬಲ್ಲ ಗೂಗೆಕಣ್ಣು.

ಕಲಿಯುಗ—ವಿದ್ಯಾರ್ಥಿ ದೆಸೆ, ಕಲಿಯುವ ಕಾಲ.

ಕಲ್ಲು—ಗುಡಿಯ ಬೋದಿಗೆ ಕಲ್ಲು, ಕಡೆ ಮೂಲೆ ಸೆರಗು ಕಲ್ಲು, ವರವನು ಕೊಡುವಾತ ಬೇರೆ....ಪೂಜಾರಿ; ಕಲ್ಲಾಗಿರಬೇಕು, ಕಲ್ಲಾಗಿರಬೇಕು ಕೆಳದರ್ಜೆಯರೊಳಗೆ; ಕಲ್ಲುಹರಳುಗಳ ನಡುವೆ ಕಾಳು ಇರಬಹುದಾದ್ದರಿಂದ, ಕೊಂಡು ತಂದದ್ದನ್ನು ಆರಿಸುವುದು ಆವಶ್ಯಕ.

ಕಲ್ಲೆದೆ—ಎಂಥ ಕಲ್ಲೆದೆಯನ್ನಾದರೂ ಸುವರ್ಣಾಸ್ತ್ರದಿಂದ ಭೇದಿಸಬಹುದು.

ಕಲೋಪವಾಸಕ—ಕಲಾಜೀವನಕ್ಕೆ ಬಿದ್ದು ಉಪವಾಸ ಅನುಭವಿಸುತ್ತಿರುವ ನತದೃಷ್ಟ.

ಕವರು—ಬಿಲ್ಲುಗಳನ್ನಿರಿಸುವ ಬತ್ತಳಿಕೆ.

ಕವಿ—ಕವಿ ! ಕೊಲ್ !—ಎಂದು ಹಿಂದೆ ಪಟುಭಟರು ಕೂಗಿ ನುಗ್ಗುತ್ತಿದ್ದರು, ಕನ್ನಡನಾಡಿನಲ್ಲಿ; ಪುಣ್ಯಕ್ಕೆ, ಈಗ ಹಾಗೆ ನುಗ್ಗುವವರು ಕಡಮೆ; "ಕೋಕಿಲಾಲಾಪವಾಚಾಲಃ ಕವಿಃ"

ಕವಿಕಾಳಗ—ಕಸ ಕಗ್ಗ ಎಂದು ಒಬ್ಬ ಕವಿ ಮತ್ತೊಬ್ಬನನ್ನು ವಿಮರ್ಶಿಸುವುದು.

ಕವಿತಾಶಕ್ತಿ—ಇದು ಕೇವಲ ದೇವದತ್ತ; ಆದ್ದರಿಂದ, ಕವಿಗಳನ್ನು ದೂಷಿಸಿ ಫಲವಿಲ್ಲವಂತೆ.

ಕವಿಜನವಿನೋದ—ಕುಕವಿ.

ಕವಿವೇಕಿ—ಅವಿವೇಕಿಯಾದ ಕವಿ.

ಕವೋಷ್ಣಂ—ಕವಿಗೆ ತಗಲುವ ಕಾವು.

ಕಷ್ಟ—ನಮಗಾಗುವ ನಷ್ಟ ಅಥವ ಮತ್ತೊಬ್ಬನಿಗಾಗುವ ಲಾಭ; ಕಷ್ಟವಾದ ಕೆಲಸಗಳೆಲ್ಲ ಅಸಾಧ್ಯವಾಗಿದ್ದಿದ್ದರೆ ಕಷ್ಟ ತಪ್ಪುವುದು.

ಕಷ್ಟದಿಕ್ಪಾಲಕ—ಶತ್ರುಗಳು ನುಗ್ಗಿ ಬರಲು ಯತ್ನಿಸುವ ದಿಕ್ಕನ್ನು ಪಾಲಿಸು-ವವ.

ಕಷ್ಟಪೂರ್ತಿ—ಕಷ್ಟಮಾಡಿಸಿಕೊಂಡು ಅದು ಪೂರ್ತಿಯಾದಾಗ.

ಕಷ್ಟಮಾಡು—ಕತ್ತಿ ಮೊಂಡಾದರೆ, ಕ್ಷೌರಕ್ಕೆ ಈ ಹೆಸರು.

ಕಷಾಯ—ಕಷಾಯಗಳನ್ನೆಲ್ಲ ತೊರೆದದ್ದಕ್ಕೆ ಕಾಷಾಯವೇ ಚಿಹ್ನೆ.

ಕಷ್ಟೋತ್ತರ—ನೂರೆಂಟು ಕಷ್ಟಗಳನ್ನು ವಿವರಿಸಿ ಕಣ್ಣೀರು ಬರಿಸಿ ಸಾಲ ಕೇಳುವ ಉಪಾಯ.

ಕಸ—ರಸ ತೆಗೆಯಲಾರದೆ ಎಸೆದ ಪದಾರ್ಥ.

ಕಸದಬುಟ್ಟಿ—ಇದನ್ನು ತುಂಬುವುದಕ್ಕಾಗಿಯೇ ಅನೇಕ ಬರಹಗಾರರೂ ಅಚ್ಚು ಕೊಟದವರೂ ಹಗಲಿರುಳೂ ದುಡಿಯುತ್ತಿರುವುದು.

ಕಸಾತಲ—ಗೊಬ್ಬರದ ಗುಂಡಿ.

ಕಸ್ತೂರಿ—ಕತ್ತು ಬಲ್ಲುದೆ ಹೊತ್ತ ಕತ್ತುರಿಯ ಪರಿಮಳವ ? (ಗಾದೆ).

ಕಹಿಷ್ಕರಿಸು—ಕಹಿಯಾಗಿ ತೋರಿದ್ದರಿಂದ, ದೂರವಿರಿಸು.

ಕಳವಳಧ್ವಂಸ—ತಾಪತ್ರಯಗಳನ್ನೆಲ್ಲ ತಿಂದು ಜೀರ್ಣಿಸಿಕೊಂಡು, ಶಾಂತಿ ಪಡೆ-ಯುವಿಕೆ; ಕವಳಧ್ವಂಸದ ಸಮಸ್ಯೆ ತೀರಿದಾಗ, ಇದೂ ನೆರವೇರುತ್ತದೆ.

ಕಳಿಂಗ—ಶಕುನೀಸಮಾನ.

ಕಳೆ—ಬೆಳೆಗಿಂತ ಸೊಂಪ್ಪಾಗಿ ಬೆಳೆವ ಗಿಡಗಳು.

ಕಳ್ಳ—ಹಿಂದೆ ಕಳ್ಳರು ಎಂಬ ಪ್ರತ್ಯೇಕ ಜನಾಂಗವೇ ಒಂದಿತ್ತು; ಈಚೆಗೆ, ಪ್ರತ್ಯೇಕ...ಇಲ್ಲ; ತಪ್ಪಿಸಿಕೊಳ್ಳುವಷ್ಟು ಕದಿಯುದವ; ಕದ್ದರೂ, ಸರಿಯಾದ ಲಾಯರನ್ನಿಟ್ಟು ಕದ್ದಿಲ್ಲ ಎಂದು ವಾದಿಸಿ ಸಾಧಿಸಲರಿಯದವ; ಕಳ್ಳ ಮುಟ್ಟುವುದೆಲ್ಲ ಚಿನ್ನ, ಅದು ಅವನ ಹಸ್ತಗುಣ; ಕಳ್ಳನನ್ನು ಹಿಡಿಯುವುದಕ್ಕೆ ಕಳ್ಳನನ್ನು ಕಳುಹಿಸಿದರೆ, ಇಬ್ಬರೂ ಹಂಚಿಕೊಳ್ಳುವುದಕ್ಕನುಕೂಲ; 'ಕಳ್ಳರಿಬ್ಬರು ಸೇರಿದರೆ; ಕೊಳ್ಳೆ.'

ಕಳ್ಳತನ—ಪ್ರಾಚೀನ ಭಾರತೀಯರ ಒಂದು ಕಲೆ.

ಕಳ್ಳಹೊನ್ನು—ಕಳ್ಳಹೊನ್ನಿಗೆ ದೊಡ್ಡ ಮುದ್ರೆ ಹಾಕಿದರಾಯಿತು.

ಕಕ್ಷಿವಾಹನ—ಕಕ್ಷಿಗಳ ಮೇಲೆ ಸವಾರಿಮಾಡುವವ; ಲಾಯರು.

ಕ್ಲಬ್ಬು—ಸಮಾನವಿದ್ಯಾ+ಬುದ್ಧಿ+ಶೀಲ+ವಿತ್ತ ವಯಸ್ಕರ ಕೂಟ; ಹೆಂಡತಿಯರ ಕಾಟ ತಪ್ಪಿಸಿಕೊಳ್ಳಲು ಗಂಡಂದಿರು ಹೂಡಿರುವ ಆಟ.

ಕಾಕತಾಳೀಯ—ಕಾಗೆಗೆ ತಾಳಿ ಕಟ್ಟಲು ಹೊರಡುವ ಸಾಹಸಿಯಂತೆ.

ಕಾಕಬುದ್ಧಿ—ನವನೀತ ತಂತ್ರ ಎಂದು ಕನ್ನಡಿಗರು ಹೇಳುವುದನ್ನೇ ಅರವದವರು ಕಾಕಗ್ರಹಣ, ಕಾಕಬುದ್ಧಿ ಎಂದು ಹೇಳುವುದು; ಕಂಡವರ ಮಕ್ಕಳನ್ನು ತನ್ನ ಮಕ್ಕಳಂತೆಯೇ ಸಾಕಿ ಮನೆ ಹಾಳು ಮಾಡಿಕೊಳ್ಳುವ ಬುದ್ಧಿ; ಔದಾರ್ಯ.

ಕಾಕೀ—ಗೂಬೆಯ ತಾಯಿ.

ಕಾಕು—ಅತಿ ಕೊಂಕುನುಡಿ ಕಾಕೆನಿಕ್ಕು.

ಕಾಗಜೀರಾಜ್—ಪತ್ರೀಸರ್ಕಾರ್; ಕಾಗದ-ಪತ್ರಗಳ ಬರವಣಿಗೆಗಳಿಂದಲೇ ನಡೆಯುವ ದೌಲತ್ತು.

ಕಾಗೆ—ಕೂಳು ಚೆಲ್ಲಿದರೆ ಕಾಗೆಗಳಿಗೇನು ಕಮ್ಮಿ (ಗಾದೆ): ಸಕುಟುಂಬ ಸಪರಿವಾರವಾಗಿಯೇ ಆಗಮಿಸುವ ಬಂಧುಪ್ರೇಮಿ.

ಕಾಟಾಚಾರ—ಬೆಕ್ಕನ್ನು ಪೂಜಿಸುವ ಪ್ರಾಚೀನ ಐಗುಪ್ತರ ಪದ್ಧತಿ.

ಕಾದಂಬರಿ—ಈಚಲಹೆಂಡ; ಅಷ್ಟೇ ಮಾದಕವಾದ ಕತೆ; ಕೊಂಡು ಓದಬೇಕು ಎಂಬ ನಿರ್ಬಂಧವಿಲ್ಲದಿದ್ದರೂ, ಅನೇಕರು ಇದನ್ನು ಬರೆದೇ ಬಿಡುತ್ತಾರೆ; ಹಲವರು ಅವರನ್ನು ಪ್ರಕಟಿಸಿಯೇ ಬಿಡುತ್ತಾರೆ; ಅದೇ ಆಶ್ಚರ್ಯ.

ಕಾನೂನು—ಸಾಮ+ದಾನ+ಭೇದ+ದಂಡಗಳ ನಂತರ ಅನೇಕರು ತಮ್ಮ ಇಷ್ಟಪೂರ್ತಿಗಾಗಿ ಅವಲಂಬಿಸುವ ಉಪಾಯ.

ಕಾಪ್ಯಾಯಮಾನ—ಕಾಪಿ ಕುಡಿದ ಮೇಲೆ ಉಂಟಾಗುವ ಅಪ್ಯಾಯಮಾನ ಪರಿಸ್ಥಿತಿ.

ಕಾಪಿಷ್ಠ—ಕಾಪಿಯಿಸ್ಟ್ ಆಗಿ ಸೇರಿರುವ ಪಾಪಿಷ್ಠ.

ಕಾರ್ಪಣ್ಯ—ಕಾರ್ಪಣ್ಯದಿಂದ ಕೂಡಿ ಹಾಕಿದ ಹಣದಿಂದ ಕೊಂಡ ಕಾರು.

ಕಾಫಿ—ಕಾಫಿ ಎಂಬ ಗಿಡದ ವಿಷಬೀಜದ ಬೆರಕೆಯೇ ಇಲ್ಲದೆ, ಇತರ ಪದಾರ್ಥಗಳಿಂದ ಮಾಡಿದ ಒಂದು ತರಹದ ಪುಡಿ; ಚಹ ಮಾಡುವುದಕ್ಕೆ ಚೆನ್ನಾಗಿ ಬರದ ಜನ ಇದನ್ನೇ ಕುಡಿಯುತ್ತಾರೆ.

ಕಾರ್ಭಟಿಸುವುದು—ಹಳೇ ಕಾರಿನಲ್ಲಿ ವೇಗವಾಗಿ ಪ್ರಯಾಣ ಬೆಳೆಸುವಾಗ.

ಕಾಮುಕ್ಕಿ—ಮುಕ್ಕಿ ಕಾ ಮುಕ್ಕಿ ಎಂಬುದನ್ನು ನೋಡಿ.

ಕಾಮಗಾರಿ—ವಿಟಲೀಲೆ.

ಕಾಮನಬಿಲ್ಲು—ಕವಿಗಳು ಇದನ್ನು ಕಾಮನ ಬಿಲ್ಲೆಂದೂ, ಕಲಿಗಳು ಇದನ್ನು ಭೀಮನ ಬಿಲ್ಲೆಂದೂ ಕರೆಯುವರು.

ಕಾಯಿತಿ—ಕಾಯಬಲ್ಲ ತಾಯಿತಿ.

ಕಾರಣ—ನಾವು ಮಾಡುವ ಕೆಲಸಕಾರ್ಯಗಳೊಂದೊಂದಕ್ಕೂ ಕಾರಣ ಕೇಳಿದರೆ ನಾವು, ಒಳ್ಳೆಯ ಕಾರಣ ಹೇಳಲೇ ? ನಿಜವಾದ ಕಾರಣ ಹೇಳಲೆ ? ಎಂದು ಕೇಳಬೇಕಂತೆ.

ಕಾರಾಗೃಹ—ಇಲ್ಲಿಂದ ಅನೇಕರು ಕಂಬಿಕೀಳುವುದುಂಟು.

ಕಾರುಪತ್ಯ—ಮಾವನ ಕಾರಿನ ಮೇಲೆ ಅಳಿಯ ನಡೆಸುವ ಪಾರುಪತ್ಯ.

ಕಾರ್ಕೋಟಕ—ಕಾರನ್ನು ನಯನೀತಿ ಇಲ್ಲದೆ ನಡೆಸುವ ಕಾಳಿಂಗ.

ಕಾರೋಹಣ—ಕಾರು ಹತ್ತುವ ಸಮಾರಂಭ.

ಕಾಲಕೂಟ—ಕ್ಲುಪ್ತಕಾಲಕ್ಕೆ ಸೇರುವ ಕೂಟ: ಕಾಲಮೀರಿ ಬರುವ ಅನೇಕರಿಗೆ ಇದರಿಂದ ತುಂಬ ತೊಂದರೆಯಾಗುವುದು.

ಕಾಲಪುರುಷ—ರೇಡಿಯೋ ನಿಲಯಗಳಲ್ಲಿ ಕಾಲಾವಕಾಶ ಮುಗಿಯಿತು ಎಂದು ಸೂಚಿಸುವ ನೌಕರ.

ಕಾಲಸ್ಥಿತಿ—ವಾತ ಉಳುಕು ಇತ್ಯಾದಿಗಳಿಂದ ಇದು ಕೆಡುವುದುಂಟು.

ಕಾಲಿಂಗನ—ಕಾರೇವಾಸಿ ಕತ್ತೆ, ಕಾಲು ಕಟ್ಟುವುದು.

ಕಾಲು—ಕಾಲೇ ಕಂಬ; ನಾವು ಇದಕ್ಕೆ ಬುದ್ಧಿ ಹೇಳಬಹುದು; ನಮ್ಮ ಕಾಲಿನ ಮೇಲೆ ನಿಲ್ಲದೆ, ನಾವು ಕಂಡವರ ಕಾಲು ಹುಡುಕುವುದು ತಪ್ಪಂತೆ; ಲೋಕಾನುಭವ ಇಲ್ಲದವರು ಹೇಳುತ್ತಾರೆ.

ಕಾಲೇಜು—ಅಪ್ಪನ ಆಸ್ತಿ ಕರಗಿಸಲು ಮಕ್ಕಳು ಸೇರಬೇಕಾದ ಸಂಸ್ಥೆ; ಇಲ್ಲಿಯ ವ್ಯಾಸಂಗದ ಬೆಲೆ ನಮಗೆ ಗೊತ್ತಿಲ್ಲದಿದ್ದರೂ, ಇದಕ್ಕಾಗುವ ಖರ್ಚು ನಮಗೆ ಗೊತ್ತು; ಏಳೆಂಟು ವರ್ಷಗಳಕಾಲ ಪುಣ್ಯವಂತರ ಮಕ್ಕಳು ಕಾಲಕ್ಷೇಪಮಾಡುವ ಜಾಗ; ಇಲ್ಲಿಂದ ಹೊರಟ ಮೇಲೆ ಅನೇಕರು ವಿದ್ಯಾವಂತರಾಗುತ್ತಾರೆ.

ಕಾವಿಭೂತ—ಕಾವಿ ಧರಿಸಿರುವ ಹಿಂಸಕ; ಕಾವಿನಿಂದ ಉಂಟಾದದ್ದು ಎಂದೂ ಹೇಳಬಹುದು.

ಕಾವು—"ಕಾವೂ ಸಾಯದು, ಸೋಲೂ ಮುರಿಯದು" (ಗಾದೆ).

ಕಾವೇರಿ—ಕಾವೇರಿದಾಗ ಕಾವ್ಯ.

ಕಾಶಿ—ಸತ್ತು ಸುಣ್ಣವಾಗುವುದಕ್ಕೆ ಪ್ರಶಸ್ತವಾದ ಊರು.

ಕಾಶುಪತಾಸ್ತ್ರ—ಕಾಸಿರುವವರ ಧೋರಣೆಕ್ಕೊದಗುವ ಡಂಭ.

ಕಾಳಸಂತೆ—ಕಾಳ ಒಬ್ಬನೇ ಅಲ್ಲ, ಅವಕಾಶ, ಅನುಕೂಲ ಸಿಕ್ಕಿದವರೆಲ್ಲ ನಡೆ-ಸುವ ಸಂತೆ.

ಕಾಳಿದಾಸ—ಇವತ್ತು ಈತ ಬದುಕಿದ್ದರೆ, ಈತನ ಖ್ಯಾತಿ ಜಗತ್ತೆಲ್ಲ ವ್ಯಾಪಿಸು ವುದು; ಏಕೆಂದರೆ, ಈತನಿಗೆ ಸುಮಾರು ಸಾವಿರದ್ಶೈನೂರು ವರ್ಷ ವಯ-ಸ್ಸಾಗಿರುತ್ತಿತ್ತು.

ಕ್ಯಾಷಿಯರ್—ಬ್ಯಾಂಕುಗಳಲ್ಲಿ ಕೇವಲ ಲೆಕ್ಕಕ್ಕೆ ಮಾತ್ರ ದುಡಿಯುವ ನೌಕರ; ಇವನು ಎಲ್ಲರಂತಿರಬಾರದು; ಇದ್ದರೆ, ಹಣ ದೋಚಿಕೊಂಡು ಓಡಿ-ಹೋಗುವಾಗ, ಹಿಡಿದುತರುವುದು ಕಷ್ಟ.

ಕ್ರಾಂತಿ—ಹಣ್ಣಾದ ಹುಣ್ಣಿನ ಶಸ್ತ್ರಕ್ರಿಯೆ.

ಕಿಕ್ಕಿರಿದು—ಒದ್ದು....ಬೀಳಿಸಿ....ಅನಂತರ....ಇರಿದು.

ಕಿಂಕರರು—ವಾರ್ವಿಕ್ ಪ್ರಭು ಇತ್ಯಾದಿ ರಾಜಸೃಷ್ಟಕರು.

ಕಿಂಕರಾಭರಣ— ಆಳು, ಪ್ಯೂನು, ಜವಾನ, ಷೋಫರ್ ಇತ್ಯಾದಿ ನೌಕರರಿಗೆ ಶ್ರೀಮಂತರು ತೊಡಿಸುವ ಉಡಿಗೆ, ತೊಡಿಗೆ, ಬ್ಯಾಡ್ಜು, ಬೆಲ್ಟು ಇತ್ಯಾದಿ.

ಕಿಂಕಾಂಗು—ಸ್ವೈಚ್ಛ್ಯಾನುಸಂಧಾನಪ್ರಾರ್ಥನೆಯರೀತ್ಯಾ ದೇವರು ; "ಕಿಂಕಾಂಗು ನೀ, ಕ್ರಿಮಿ ನಾನು," ಮುಂತಾದ್ದನ್ನು ನೋಡಿ.

ಕಿಂಕ್ಯಾಪು—ರಾಜಶಿರೋವಸ್ತ್ರ.

ಕಿಚ್ಚನ್— ಮನೆಮನೆಯಲ್ಲಿಯೂ ಕಿಚ್ಚು ಉರಿವ ಸ್ಥಳ.

ಕಿಚ್ಚು—ಇದನ್ನು ಅನೇಕರು ತಮ್ಮ ಹೊಟ್ಟೆಯಲ್ಲಿ ಹುಟ್ಟಿದಂತೆಯೇ ಪಾಲಿಸುತ್ತಾರೆ ; ಕೆಲವು ಸಂದರ್ಭಗಳಲ್ಲಿ ಸ್ವರ್ಗಕ್ಕೇನೇ ಕಿಚ್ಚು ಹಚ್ಚಬಹುದೆಂದು ಸರ್ವಜ್ಞ ಸಮ್ಮತಿಸಿರುವನು.

ಕಿಡಿಮದ್ದು— ಸಿಡಿಮದ್ದನ್ನು ಸಿಡಿಸಲು ಕಿಡಿಮದ್ದು ಬೇಕು ; ಮತದ್ವೇಷ ; ಜಾತಿವೈರ : ಜಾತ್ಯಭಿಮಾನವೂ ಕಿಡಿಮದ್ದಾಗಬಹುದು.

ಕಿಂನರ—ಅಕ್ಕಿ, ಬೇಳೆ ತಿಂಬ ಕುದುರೆ.

ಕಿಂಪುರುಷ—ಹುರುಳಿ, ಕಡಲೆ, ಹುಲ್ಲು ತಿಂಬ ನರಮನುಷ್ಯ.

ಕಿರಿತ—ಹಲ್ಲಿನ ಒಂದು ಚೇಷ್ಟೆ; ನಮಗೆ ಅರ್ಹತೆಯಿಲ್ಲದಿದ್ದರೂ, ಆಸೆಪಟ್ಟದ್ದನ್ನು ಪರರಿಂದ ಪಡೆಯಲು ಕಿರಿತ ಒಳ್ಳೆಯ ಸಾಧನ.

ಕಿರಿಯಣ್ಣ—ಸಿರಿಯಣ್ಣನುಳ್ಳನಕ ಹಿರಿಯಣ್ಣನೆನಿಪ ; ಸಿರಿಯಣ್ಣ ಹೋದ ಮರುದಿನವೆ ಹಿರಿಯಣ್ಣ ಕಿರಿಯಣ್ಣನೆಂದ, ಸರ್ವಜ್ಞ.

ಕಿರುಕ—ತಿರುಕ ಹುಡುಗ.

ಕಿವುಡ— ವಾಕ್ಚಿತ್ರಗಳನ್ನು ಮೂಕಚಿತ್ರಗಳಂತೆ ನೋಡುವ ಪುಣ್ಯವಂತ.

ಕಿವಿ—ಇದರ ಮೇಲೆ ಹಾಕಿದ್ದೆಲ್ಲ ತಲೆಯೊಳಕ್ಕೆ ಹೋಗುತ್ತದೆ—ಎಂಬುದು ತಪ್ಪು.

ಕಿಂವತಂತಿ—ತಂತೀಮೂಲಕ ಪತ್ರಿಕಾಲಯಗಳಿಗೆ ತಲುಪಿದ ವದಂತಿ.

ಕಿಷ್ಕಿಂಧೆ— ಮಕ್ಕಳೊಂದಿಗರ ಮನೆ.

ಕಿಸೆಹರಕ—ಒಂದು ತೆರನ ಗುಂಪು ಜೀವಿ; ಚಿಲ್ಲರೆ ಮಕ್ಕಳ; ಬೆರಳ ನಯಗಾರ.

ಕಿಂನರ—ಹೇಮಕೂಟ, ಅಂದರೆ, ಚಿನ್ನದ ರಾಶಿಯಮೇಲೆ ಇರುವವರು ನರರೋ ಎಂಬ ಶಂಕೆ.

ಕಿಂಸ್ತ್ರೀ—ಕಿಂಪುರುಷನ ಮಡದಿ.

ಕ್ಲಿಯೊಪಾತ್ರ—ಈಕೆಯ ಮೂಗು ಇನ್ನೂ ಕೊಂಚ ಮೊಟಕಾಗಿದ್ದರೆ, ಚರಿತ್ರೆಯಲ್ಲಿ ಆಕೆ ವಹಿಸಿದ ಪಾತ್ರ ಅಷ್ಟು ಮಹತ್ತರವಾಗುತ್ತಿರಲಿಲ್ಲವಂತೆ; ತನ್ನ ಮೂಗಿಂದ ಇತರರ ಮೂಗು ಮುರಿದ ಮಹಿಳೆ.

ಕೀಚಕಿ—ಮನೆಯಲ್ಲಿ ಹೀಗೆ ಕೂಗದಿರುವುದೇ ಮೇಲು.

ಕೀರ್ತನಕಾರ—ಸ್ವರ್ಗವನ್ನು ಅಷ್ಟಾಗಿ ಹೊಗಳಿದರೂ ಅಲ್ಲಿಗೆ ಹೊರಡಲು ಆತುರ ತೋರಿಸದವ.

ಕೀಧಾವಿ—ಮೇಧಾವಿಯನ್ನು ನೋಡಿ.

ಕೀನಾಶ—ದೀನ; ಬೀಗದ ಕೈಯನ್ನು ಕಳೆದುಕೊಂಡ ಪೆಂಗ.

ಕೀರ್ತನಕೇಸರಿ—ಗಮಕಕೇಸರಿ ಸಂಗೀತಕೇಸರಿ ಎಂಬಂತೆ, ಕೀರ್ತನಕ್ಕೇ ಸರಿ ಎಂದೂ ಉಳಿದವುಗಳಿಗೆಲ್ಲ ಸರಿಯಲ್ಲವೆಂದೂ ಇದಕ್ಕೆ ಅರ್ಥ.

ಕೀಳುನೋಟ—ಯಾರಿಂದ ಏನನ್ನು ಕಿತ್ತುಕೊಳ್ಳೋಣ ಎಂದು ಹುಡುಕುವ ಹದ್ದುಗಣ್ಣು.

ಕ್ರೀಡೆ—ಹಲವು ಜನ ಆಡುವುದನ್ನು ಸಾವಿರಾರು ಜನ ನೋಡುತ್ತ ಕುಳಿತಿರುವ ಸಂಪ್ರದಾಯ; ಆಡುವುದೂ ಕ್ರೀಡೆ, ನೋಡುವುದೂ ಕ್ರೀಡೆಯೇ.

ಕುಕವಿನಿಂದೆ—ಇದನ್ನು ಎಂಥ ಕವಿಯಾದರೂ ಮಾಡಲೇಬೇಕಂತೆ; ಹಾಗೆಂದು ಶಾಸ್ತ್ರವಿರುವುದರಿಂದ ಆತ್ಮನಿಂದೆಯ ಪಾಪ ಇದಕ್ಕಿಲ್ಲ.

ಕುಕ್ಕು—ತಪ್ಪಲೆ ಮುಂತಾದವುಗಳನ್ನು ಎತ್ತಿ ಕುಕ್ಕುವುದರಿಂದ ಈತನಿಗೆ ಈ ಹೆಸರು ಬಂದಿರಬಹುದೆಂದು ತೋರುತ್ತದೆ.

ಕುಕ್ಕೆ—ಕುಕ್ಕೆ, ಅಂದರೆ, ಕುಕ್ಕಿಬಿಡುವುದಕ್ಕಾಗುತ್ತದೆಯೆ ? ಒಳಗೇನೇನಿದೆ ಎಂದು ಯೋಚಿಸಿ ಅನಂತರ ಕುಕ್ಕಬೇಕಾಗುತ್ತದೆ.

ಕುಕ್ಷಿಗಾರ—ಹೊಟ್ಟೆಬಾಕ.

ಕುಕ್ಷಿಪ್ರತಿಕುಕ್ಷಿ—ಕಕ್ಷಿಪ್ರತಿಕಕ್ಷಿಗಳೆಲ್ಲ ಇಂಥವೇ.

ಕುಕ್ಷಿಪೂರ್ತಿಶಾಂತಿ—ಈಚೆಗೆ ಇದನ್ನು ಮಾಡಿಸಿಕೊಳ್ಳುವವರೇ ಕಡಮೆ.

ಕುಗ್ರಾಣ—ರೇಷನ್ ಯುಗದ ಉಗ್ರಾಣ.

ಕುಗ್ರಾಮ—ಎರಡು ಮೈಲಿ ಸುತ್ತ ಯಾವ ಸಿನಿಮ ಮಂದಿರವೂ ಇಲ್ಲದ ಹಳ್ಳಿ.

ಕುಚಾಗ್ರಬುದ್ಧಿ—ವಿಟರ ಬುದ್ಧಿ.

ಕುಟುಂಕಿನೀ—ಕುಟುಕುವ ಕುಟುಂಬಿನೀ.

ಕುಟ್ಟಿಕಾಧ್ಯಾಯ—ಲೆಕ್ಕದಲ್ಲಿ ಇದನ್ನು ಹೇಳಿಕೊಡುವಾಗ ಮೇಷ್ಟರು ಕುಟ್ಟುತ್ತಿರುತ್ತಾರೆ, ಶಿಷ್ಯರ ತಲೆಯ ಮೇಲೆ.

ಕುಂಟಪ— ಮುರುಕಲು ಮಂಟಪ.

ಕುಂಟಾಘೋಷ—ಗೆಲ್ಲುತ್ತೇವೆ ಎಂಬ ಧೈರ್ಯವಿಲ್ಲದ ಪಕ್ಷದವರು ಮಾಡುವ ಪ್ರಚಾರ.

ಕುಂಟುನೆಪ—ನಮ್ಮ ಮನಸ್ಸಿಗೆ ಹಿತವೆನಿಸದ ಸಬೂಬು.

ಕುಡಿಯನ್—ಕುಡಿಯನೆನಲ್ ಸಿಕ್ಕಿಲಗನೆಂದು ಇಳೆಗೆ ಸಿದ್ಧಾಂತವು (ಕಬ್ಬಿಗರ ಕೈಪಿಡಿ).

ಕುಂಡಲಪಂಡಿತ—ಕುಂಡಲ ಸಂಪಾದಿಸುವ ವಿದ್ಯೆಯಲ್ಲಿ ಪಂಡಿತ.

ಕುದಿನೀರು—ಖಾಯಲೆ ಕಸಾಲೆ ಬರದೆ ಇರುವುದಕ್ಕಾಗಿ ಹಲವರು ಬುದ್ಧಿವಂತರಾಗಿ ನೀರನ್ನು ಚೆನ್ನಾಗಿ ಕುದಿಸಿ, ಅದನ್ನು ಒತ್ತಟ್ಟಿಗಿಟ್ಟು....ಮದ್ಯವನ್ನು ಕುಡಿಯುತ್ತಾರೆ.

ಕುದುರೆ—ಇದನ್ನು ಬರೆಯುವಾಗ, ಎರಡು ಕೊಂಬುಗಳನ್ನು ಸೇರಿಸಲೇಬೇಕು.

ಕುದುರೆಗಾಡಿ—ಗಾಡಿಯೊಳಗೆ ಯಾರು ಕುಳಿತಿದ್ದಾರೆ ಎಂದು ಗೊತ್ತಾದರೆ, ಎಲ್ಲಿ ಕುದುರೆ ಅವರನ್ನು ಎಳೆಯಲು ಒಪ್ಪುವುದಿಲ್ಲವೋ ಎಂಬ ಭಯದಿಂದ, ಕುದುರೆಯನ್ನು ಸಾಮಾನ್ಯವಾಗಿ, ಗಾಡಿಯ ಮುಂದೆಯೇ ಕಟ್ಟಿರುತ್ತಾರೆ.

ಕುದುರೆಜೂಜು—ಹೊಟ್ಟೆಗೆ ಹಿಟ್ಟಿಲ್ಲ, ಜುಟ್ಟಿಗೆ ಜೂಜಿನ ಚೀಟಿ (ಗಾದೆ); ಪಾಪಿ ಪಣತೊಟ್ಟರೆ, ಕುದುರೆಗೆ ಮೊಣಕಾಲು ಮುರಿಯಿತು (ಗಾದೆ).

ಕುದುರೆಬುದ್ಧಿ—ತಮ್ಮನ್ನು ಓಡಿಸಿ ಜೂಜು ನಡೆಯಿಸಿ ಮನುಷ್ಯ ಹಣ ಗಳಿಸುತ್ತಿರುವುದನ್ನು ಕಂಡು, ಮನುಷ್ಯರನ್ನು ಓಡಿಸಿ ಜೂಜು ನಡೆಯಿಸಿ ತಾನು ಹಣ ಗಳಿಸಲು ಪ್ರಯತ್ನಿಸದಿರುವುದು ಕುದುರೆಯ ಬುದ್ಧಿಗೆ ನಿದರ್ಶನ.

ಕುಂದುಮತಿ—ಹೆಂಡಕುಡುಕನ ಮಿದುಳು.

ಕುಬೇರ—ರಿಕ್ಷಾಗಾಡಿಯಲ್ಲಿ ಕೂತು ಹೋಗುವವ.

ಕುಬೇರಹೃದಯ—ಸ್ತೋತ್ರದಿಂದ ಕುಬೇರರೊಲಿಯುವರು.

ಕುಂಭಕರ್ಣ—ಎದ್ದರೆ ಆಳಲ್ಲ ಎಂದು ಹೇಳುತ್ತಿದ್ದವ; ನೆರೆಮನೆಯ ರೇಡಿಯೋ ಕಾಟವಿಲ್ಲದೆ ಸದಾ ಸುಖವಾಗಿ ನಿದ್ದೆ ಮಾಡುವವ; ಕೊಡದ ಕಿವಿಯವ ಅಂದರೆ ಚಾಡಿ ಕೇಳದವ.

ಕುಂಭಕೋಣ—ಇದರ ಅರ್ಥವನ್ನು ಬಿಡಿಸಿ ಹೇಳಿದರೆ ಆ ಊರಿನವರು ತುಂಬ ರೇಗುತ್ತಾರಂತೆ.

ಕುಮಾರಸಂಭವ—ಪುತ್ರೋತ್ಸವ.

ಕುರಿ—"ಗುರು ಕುರಿಯನೇರಿದರೆ, ಧರೆಗೆ ಮಳೆ, ಪರಿಪರಿಯ ಬೆಳೆ, ಪ್ರಜೆಗಳಿಗೆ ನೆರೆಹರುಷ"....ಆದರೆ, ದಯವಿಟ್ಟು, ಇದನ್ನು ಶಾಲಾ ಹುಡುಗರ ಕಿವಿಗೆ ಹಾಕಬೇಡಿ.

ಕುರಿಕಣ್ಣು— ಪ್ರೇಮದೃಷ್ಟಿ (ಆಂಗ್ಲ).

ಕುರಿದುಂಬಿಸು — ಹೇಡಿತನವನ್ನು ಹರಡು; ಬರಬರುತ್ತ ಕಾಲ ಕೆಡುತ್ತಿದೆ ಎಂಬ ಪ್ರಚಾರ.

ಕುರಿಷತ್ತು—ಹೆಚ್ಚು ಶಿಸ್ತಿನಿಂದ ಕೂಡಿದ ಪಕ್ಷವೊಂದರ ಸಮ್ಮೇಳನ; ಕುರಿಷತ್ತಿಗೆ ತೋಳನೇ ಅಧ್ಯಕ್ಷ (ಗಾದೆ).

ಕುರುಡಗಂಬ—ಕಣ್ಣುಕಾಣದವರು ಹಿಡಿದು ನಡೆವ ಕಂಬ.

ಕುರುಡುಪುರಾಣ—ಒಬ್ಬ ಬಿದ್ದ ಹಳ್ಳಕ್ಕೆ ಅವನ ಹಿಂದೆ ಬಂದವನೂ ಬಿದ್ದ ಕತೆ; ಮಾನವನ ಚರಿತ್ರೆ.

ಕುರುಕ್ಷೇತ್ರ—ಬಾಧೆಯಿಂದ ಇದನ್ನು ಪತ್ತೆಮಾಡಬಹುದು.

ಕುಲ—ಕುಲಂ ಕುಲಮಲ್ತು; ಚಲಂ ಕುಲಂ.

ಕುಲಗಂಜಿ—ತುಸು ಕಲ್ಮಷ ಬೆರೆದು ಮುಸಿಯಾಗಿರುವ ಕುಲ; ಮನೆಯವರಿಗೆಲ್ಲರಿಗೂ ಒದಗುವಂತೆ ಮಾಡಿರುವ ಗಂಜಿ.

ಕುವಲಯಾಪೀಡೆ—ಸರ್ಕಸ್‌ನಲ್ಲಿ ಆನೆಗಾಗುವ ಹಿಂಸೆ.

ಕುಶಲಂ—ಕುಶಲಂ ಕ್ಷೇಮಮಸ್ತ್ರಿಯಾಂ (ಇತ್ಯಮರಃ) ಸ್ತ್ರೀಯರಿಲ್ಲದಿದ್ದರೆ, ಕುಶಲಂ ಎಂಬರ್ಥವಿರಬಹುದೆ ? ಇರಲಾರದು, ಅಲ್ಲವೆ ?

ಕುಸ್ತಿನಾಪುರ— ಕುಸ್ತಿ ನಡೆಯಿಸಿ ಅದರ ಮೇಲಿನ ತೆರಿಗೆಯಿಂದಲೆ ಬದುಕುವ ಮುನಿಸಿಪಾಲಿಟಿ.

ಕುಸ್ತಿಹಾರ್ನಾಮೆ—ಕುಸ್ತಿ ವಿಷಯದ ಪ್ರಕಟಣೆ.

ಕ್ರುದ್ಧಾಪ್ಯ—ವೃದ್ಧಾಪ್ಯ ಬಂದು, ಕೋಪವೂ ಕೆರಳಿದಾಗ.

ಕೂಗನ್—ಇದನ್ನೇ ಇಂಗ್ಲೀಷಿನಲ್ಲಿ ಸ್ಲೋಗನ್ ಎಂದು ಕರೆಯುತ್ತಾರೆ.

ಕೂಗಲು ಅನುಕೂಲವಾದ ಪದಸರಣಿ; ನಾಲಿಗೆಯ ಮೇಲೆ ಏರಿಸಿದ ಬಾವುಟ.

ಕೂಗ್ಯತೆ—ಕೂಗಿಕೂಗಿ ಪಡೆದ ಯೋಗ್ಯತೆ,

ಕೂಗಿಲೆ—ವಾಕ್ಚಿತ್ರಗಳಲ್ಲಿ ಕೋಗಿಲೆ ದನಿಯನ್ನನುಕರಿಸಿ ಕೂಗುವ ಮನುಷ್ಯ.

ಕೂಗುಬಂಡೆ—ಗುರುವಿಗೆ ತಿರುಮಂತ್ರ ಹೇಳುವುದು.

ಕೂಗುಭಂಡ—ಕೂಗುವ ಕಾಲ ಮುಗಿಯಿತು ಎಂದು ಕೂಗುವವ.

ಕೂಗುಯ್ಯಾಲೆ—ವೇದಿಕೆಯಿಂದ ವೇದಿಕೆಯನ್ನು ಬದಲಾಯಿಸುವಾಗ.

ಕೂಟಕರ್ಮ—ಇಬ್ಬರು ಸೇರಿ ಒಂದು ಪುಸ್ತಕ ಬರೆಯುವುದು.

ಕೂದಲು—ಕೈಗೆ ಬಂದದ್ದು (ಬಾಚುವಾಗ) ತಲೆಗಿಲ್ಲ.

ಕೂರುವುದು—ಸಿಂಹಾಸನಕ್ಕೆ ಬಂದ ಕೂಡಲೇ ರಾಜಮಹಾರಾಜರುಗಳು ಮಾಡುವ ಮೊದಲನೆಯ ಕೆಲಸ.

ಕೂಸು—ಎದ್ದು ನಿಲ್ಲಲಾರೆ, ಮಾತನಾಡಲಾರೆ ಎಂದು ಅಳುವ ಅಸಹಾಯಕ ವ್ಯಕ್ತಿ; ಮನೆ ರಾಜ್ಯದ ರಾಜ; ಹುಟ್ಟುವ ಮೊದಲೇ ಇದಕ್ಕೆ ಸಮಾಜ, ಸರ್ಕಾರ ಎಲ್ಲ ಟೋಪಿಹಾಕಲು ಏರ್ಪಾಟುಮಾಡಿರುತ್ತಾರೆ, ಕೆಲವೆಡೆಗಳಲ್ಲಿ.

ಕೂಳು—ಕೂಳ ಮೇಳವೆ ಮೇಳ; ಕೋಟಿ ವಿದ್ಯವೂ ಕೂಳಿಗೋಸ್ಕರವೇ; ಕೂಳು ಚೆಲ್ಲಿದರೆ ಕೃತಘ್ನರಿಗೇನು ಕಮ್ಮಿ ?

ಕೂಳುಬಳ್ಳಿ—ಮಂಗಳೂರು ಕಡೆ ಜನಿವಾರ.

ಕ್ಯೂ—ಟಿಕೀಟ್ ಕೊಡುವ ಬಾಗಿಲು ತೆರೆಯುವ ಮುನ್ನ, ಬಸ್ ಬರುವ ಮುನ್ನ, ಜನ ಒಬ್ಬರ ಹಿಂದೊಬ್ಬರಾಗಿ, ನಿಂತಿರುವ ಸಾಲು.

ಕೃತಘ್ನ—ನಮ್ಮಿಂದ ಉಪಕಾರ ಪಡೆದವನು.

ಕೃತಜ್ಞತೆ—ನಾಯಿ ನರಿಗಳ ಸ್ವಭಾವದಲ್ಲಿ, ನಮಗೆ ಒದಗುವ ಗುಣ; ಇದರ ಪರಿಜ್ಞಾನವೇ ಅನೇಕರಿಗಿಲ್ಲ.

ಕೃಶಾಶ್ವ—ಬಡಕಲು ಕುದುರೆಯಂತಿದ್ದ ಒಬ್ಬ ಋಷಿ.

ಕೃಷ್ಯಮೂಕ—ಬಾಯ್ದೆರೆಯದೆ ದುಡಿಯುವ ರೈತ.

ಕೆಂಚಿಂಡ್ಯರು—ಕೊಲಂಬಸ್ ಎಂಬ ನಾವಿಕನಿಗೆ ಭೂಶಾಸ್ತ್ರ ಬರದಿದ್ದರಿಂದ ಆವನು ನಮಗೆ ಸಂಪಾದಿಸಿಕೊಟ್ಟ ಬಂಧುಗಳು.

ಕೆಟ್ಟಹಾಸ—ಒಳ್ಳೆಯ ಅಭಿಪ್ರಾಯದಿಂದ ಮಾಡದ ಅಟ್ಟಹಾಸ.
ಕೆಂಡ—ದೂರದ ಕೆಂಡ ತಣ್ಣಗೆ.
ಕೆಂಡತಿಂಡಿ—ಕೋಪವನ್ನು ಕೆರಳಿಸಿ ಬದುಕುವವ.
ಕೆಂಪು—ಕೆಂಪಿನವರಲ್ಲಿ ಗುಣವಿಲ್ಲ (ಸರ್ವಜ್ಞ); ಕೆಂಪುಂಟು, ಕಂಪಿಲ್ಲ; ಕೆಂಪುಂಟು, ಒಳಗೆ ವಿಷವುಂಟು, ದುರ್ಜನರ ಪೆಂಪು ಇಂತೆಂದ ಸರ್ವಜ್ಞ.
ಕೆಂಬೋತ—ದೊಡ್ಡವರನ್ನೇ ಅನುಸರಿಸಿ, ಅನುಕರಿಸಿ ಬದುಕುವ ಮನುಷ್ಯ ಕೀಟ.
ಕೆಮ್ಮು—ಒಂದು ರೀತಿಯ ಗುಪ್ತ ಭಾಷೆ.
ಕೆಸರು—ಹೆಸರು ಕೆಡಿಸಲು ಉಪಯೋಗವಾಗುವ ಪದಾರ್ಥ.
ಕೇಕಿ—ಕುಣಿವ ಕೋಕಿಗಳ ಕೇಕಿಗಳ ಡೊಂಬಿಗಳ್ (ಜೈಮಿನಿ.)
ಕೇಡೀಕರಣ—ಹಲವು ಬಾರಿ ಕಾರಾಗೃಹವನ್ನನುಭವಿಸಿದವನು ಮೊಂಡು ಬಿದ್ದು ಮತ್ತೆ 'ಅಲ್ಲೇ ಬಂದೆ ಕದ ತೆಗಿ,' ಎನ್ನುತ್ತಾನಂತೆ.
ಕೇದಗೆಯಣ್ಣ—ತಮ್ಮನು ಪಾಸಾದ ಪರೀಕ್ಷೆಯಲ್ಲಿ ಸೋತ ಅಣ್ಣ.
ಕೇಶತೈಲ—ಇವುಗಳ ಪ್ರಚಾರ ಹೆಚ್ಚಾಗಿರುವುದಕ್ಕೆ ಬಟ್ಟತಲೆಗಳೇ ಸಾಕ್ಷಿ.
ಕೇಶಾಕೇಶಿ—ಈಚೆಗೆ ಅಷ್ಟು ಸಾಧ್ಯವಾಗದ ಜಗಳ.
ಕೇಶಾಭಿಮಾನ—ಇದರಿಂದ ತರತರದ ತೈಲವ್ಯಾಪಾರಿಗಳು ಬದುಕುತ್ತಿರುವುದು.
ಕೇಸ್—ಆಸ್ಪತ್ರೆ ಭಾಷೆಯ ಪ್ರಕಾರ ರೋಗಿ.
ಕೇಳು—ಜನಮೇಜಯಮಹಾರಾಜನಿಗೆ ಮುನಿ ಆಗಾಗ ಆಜ್ಞಾಪಿಸುತ್ತಿದ್ದದ್ದು.
ಕೈ—ಒಂದೇ ಕೈಯಿಂದ ಚಪ್ಪಾಳೆ ಸಾಧ್ಯವಿಲ್ಲ; ಆದ್ದರಿಂದ ಜಗಳವೂ ಸಾಧ್ಯವಿಲ್ಲ.
ಕೈಂಕರ್ಯ—ಕೈಎತ್ತಿ ಓಟುಕೊಟ್ಟು ಪಕ್ಷ ಗೆಲ್ಲಿಸಿ ನಡೆಸುವ ಸೇವೆ.
ಕೈಕೆಸರು—ಲಂಚ; ಇದು ಬಿದ್ದರೆ, ಬಾಯಿಗೆ ಮೊಸರು.
ಕೈಕುಲುಕುವಿಕೆ—ಪ್ರಾಚೀನ ಭಾರತೀಯ ಸ್ವಾಗತಪದ್ಧತಿ : "ಬೆಳೆದು ಬಿಗಿದಪ್ಪಿದರು, ಕರದಲಿ ಕುಲುಕಿಕರೆದರು," ದೇವತೆಗಳು ಅರ್ಜುನನ.
ಕೈಗಾರಿಕೆ—ಮೈಕೆರೆತ; ಲಂಚಸಂಪಾದನೆ.
ಕೈಬರಹ—ಸಾಮುದ್ರಿಕಾಶಾಸ್ತ್ರ ಬಲ್ಲವರು ಇದನ್ನು ಓದಿ ಅರ್ಥಮಾಡಿಕೊಳ್ಳಬಲ್ಲರು.

ಕೈಮರ—ಆತ್ಮವಿವೇಚನೆ ಇಲ್ಲದೆ ಯಾರೋ ತಂತಿ ಎಳೆದ ಕೂಡಲೇ ಎದ್ದು ಬೀಳುವ ಕೈಗಳುಳ್ಳ ಮನುಷ್ಯ; ಪಕ್ಷದ ಸದಸ್ಯ.

ಕೈಸಿರಿ—ಲಂಚ.

ಕೊಂಕಣ—ಇದನ್ನು ಸುತ್ತಿಕೊಂಡೇ ಮೈಲಾರಕ್ಕೆ ಹೋಗುವರು, ಹಲವರು ಮೂಢರು ಮತ್ತು ಹಟವಾದಿಗಳು.

ಕೊಟ್ಟಿಗೆ—ಇಂಗ್ಲೀಷಿನವರು ಕೊಟ್ಟಗೆ ಎನ್ನುತ್ತಾರೆ.

ಕೊಡಾಟೋಪ—ಮೂರು ಕಾಸು ದಾನಮಾಡುವುದಿಲ್ಲ ಎಂಬುದೇ ಹಲವರ ಆಟೋಪವಾಗಿರುತ್ತದೆ.

ಕೊಡುವವ— ಕೋಡಂಗಿ.

ಕೊಡೆ—ಕೊಡೆ ಕೊಡೆ ಎಂದು ಆತ ಹೇಳುತ್ತಿದ್ದರೂ ಮನೆಗೆ ಬಂದ ನಂಟನಿಗೆ ನಾವು ಇದನ್ನು ಕೊಡುತ್ತೇವೆ, ಮಳೆಯಲ್ಲಿ ಆತ ಹೊರಡುವಾಗ.

ಕೊಂಡಾಡು—ಕೊಂಡ ಮೇಲೆ ದೂಷಿಸು.

ಕೊತ್ತಿ— ಅತ್ತೆಯ ಮೇಲಿನ ಕೋಪಕ್ಕೆ ತುತ್ತಾಗುವ ಪ್ರಾಣಿ.

ಕೊನೆಮುಸುಕು—ಕುಣಿಯುವುದಕ್ಕೆ ಬರದವರು ಕೊನೆಮುಸುಕು ಹಾಕಿಕೊಳ್ಳಬೇಕೆಂದಿರುವಾಗ, ಕುಣಿಯುವುದಕ್ಕೆ ಅಂತ ಬಂದಮೇಲೆ ಕೊನೆಮುಸುಕು ಏಕೆ ?

ಕೊರಡು—ಇಂದ್ರಚಾಪ ಸಸಿನೆಮೂಡಿದಡೆ, ರೋಹಿತ ಎನಿಸುಗು, ಅದು.

ಕೊರವಣಿಗೆ—ಭಾಷಣದ ಉರಿಮಳೆ; ಬೇಸರಪಡಿಸುವ ಬರವಣಿಗೆ.

ಕೊರೆಚ— ಗಂಟೆಗಟ್ಟಲೆ ಭಾಷಣ, ಹರಟೆ ಇತ್ಯಾದಿಗಳಿಂದ ನಮ್ಮನ್ನು ಕೊರೆವ ಕ್ರೂರಿ.

ಕೊಲ್ಲಾಟ—ಬೆಕ್ಕಿಗೆ ಚೆಲ್ಲಾಟ; ಇಲಿಗೆ ಕೊಲ್ಲಾಟ.

ಕೊಳಾಯಿ—ಇದರ ಮುಂದೆ ಬಹಳ ಹೊತ್ತು ಕಾದು ಕೈಮುಗಿದರೆ, ನೀರು ಉಕ್ಕಬಹುದು.

ಕೊಳೇಬರ—ತಕ್ಷಣ ನೀರೊಳಕ್ಕೆ ಎತ್ತಿಹಾಕಬೇಕಾದ ವ್ಯಕ್ತಿ.

ಕೊಳ್ಳಿದೆವ್ವ— ದೆವ್ವವನ್ನು ಒಲಿಸಲು, ಅದರ ಮುಂದೆ ಮದ್ಯವನ್ನಿರಿಸಿ, ಹೀಗೆ ಹೇಳಬೇಕು.

ಕೋಗಿಲೆ— ಶಬ್ದಮಣಿದರ್ಪಣಕಾರನ ಕಾಲದಲ್ಲಿ, ಕವಕ್ಕವ ಎಲೆಎಲೆ ಒಓ ಪ್ರುಗಲ್‌ಪ್ರುಗಲ್ ಎಂದು ಒಚ್ಚರಿತ ಊಳ್ವ ಕೋಗಿಲೆ,—ಇಂದು, ಈಗ, ಕುಹೂ ಕುಹೂ ಎಂದೋ ಹೂಕು ಹೂಕು ಎಂದೋ ಕೂಗುತ್ತಿರುವುದು ಆಶ್ಚರ್ಯವೇ ಸರಿ; ಸೋವಿಯಟ್ ರಷ್ಯಾದಲ್ಲಿ ಕೋಗಿಲೆಗಳ ಕತ್ತು ಕುಯ್ಯುತ್ತಾರಂತೆ. ಯಾರೋ ಹೆತ್ತು ಯಾರಲ್ಲೋ ಬೆಳೆದರೆ, ಎಲ್ಲರೂ ಹಾಡಿ ನಲಿಯಬಹುದು ಎಂಬುದಕ್ಕೆ ಕೋಗಿಲೆಯೇ ಉದಾಹರಣೆ.

ಕೋಟಾಟಿಕೆ—ಬೂಟಾಟಿಕೆಯನ್ನು ನೋಡಿ.

ಕೋಟ್ಯಾಧೀಶ್ವರ— ದೈವಾನುಗ್ರಹ ಕೆಡದ ಪರಿಶೋಚನೀಯ ಪ್ರಾಣಿ.

ಕೋರ್ಟು—ಬಡವರನ್ನು ಶ್ರೀಮಂತರಷ್ಟೇ ಶ್ರೀಮಂತರಾಗಿ ಭಾವಿಸುವ ಸ್ಥಳ; ಆಸ್ತಿಯನ್ನು ಲಾಯರುಗಳಿಗೆಂದೇ ಬರೆದಿಡದ ಶ್ರೀಮಂತರ ಆಸ್ತಿಯನ್ನು ಅವರು ಪಡೆಯುವ ಸ್ಥಳ.

ಕೋಟೆಬಾಗಿಲು—ಊರೆಲ್ಲ ಸೂರೆಯಾದ ಮೇಲೆ ಕೋಟೆಬಾಗಿಲನ್ನು ಕದ್ದರು.

ಕೋಡೀಕರಣ—ಶಾಸನಗಳನ್ನು 'ಕೋಡ್' ರೀತಿಯಲ್ಲಿ ಕ್ರೋಡೀಕರಿಸು-ವುದು.

ಕೋತಿ— ನಮ್ಮ ವಂಶವೃಕ್ಷದ ಮೇಲೆ ನೇತಾಡುವ ಪ್ರಾಣಿ; ಮನುಷ್ಯನಂತೆ ತಪ್ಪು ದಾರಿಯನ್ನು ಹಿಡಿಯದೆ, ನೇರವಾದ ಮಾರ್ಗವನ್ನು ಹಿಡಿದು, ಫಿರಂಗಿ, ಅಣುಬಾಂಬು ಇತ್ಯಾದಿಗಳನ್ನು ಕಂಡುಹಿಡಿಯದೆ, ಪರಸ್ಪರ ಯುದ್ಧ ಹೂಡದೆ, ಬಾಳುವ ಪ್ರಾಣಿವರ್ಗ.

ಕೋದಂಡ— ದಂಡವನ್ನು ಹಿಡಿ, ಎಂದು ಅಧಿಕಾರಿಗೆ ಹೇಳಿ, ಆತನನ್ನು ನಿಯು-ಮಿಸುವಾಗ.

ಕೋಪ—ಕೋಪ ಬಂದಾಗ ನಿಧಾನಿಸಬೇಕು; ಹತ್ತು ಎಣಿಸಬೇಕು—ಏಕೆಂ-ದರೆ, ಇನ್ನೂ ಕಟುತರವಾದ ಬೈಗಳು ಜ್ಞಾಪಕಕ್ಕೆ ಬರಬಹುದು.

ಕೋಪಾಮುದ್ರಾ—ಸಹಧರ್ಮಿಣಿ.

ಕೋಮುವಾರು—ಅಂತಃಕಲಹ; ಒಳಗಿನಿಂದಲೇ, ಶತ್ರುದೇಶದವರ ಸಹಾಯದಿಂದಲೇ ಆ ದೇಶವನ್ನು ನಾಶಗೊಳಿಸುವ ಯುದ್ಧ ಪದ್ಧತಿ.

ಕೋವಿದ—ಕೋವಿಯನ್ನು ಪಡೆದಿರುವವನು, ಸದೆಬಡಿಯಲು ಸಮರ್ಥ.

ಕೋಲ—ಕಾಲದಂತೆ ಕೋಲಗಟ್ಟಬೇಕು; ಟೋಪೀಚರಿತ್ರೆಯನ್ನು ನೋಡಿ.

ಕೋಳಿ—ರೈತನ ಗಡಿಯಾರ.

ಕೋಳಿಮರಿ—ಇದರ ಹುಟ್ಟನ್ನೇ ಅನೇಕರು ಅಡಗಿಸಿಬಿಡುತ್ತಾರೆ.

ಕೌಮಾರ—ಹಸುವನ್ನು ಕೊಲ್ಲುವವ (ಆಂಗ್ಲ–ಕನ್ನಡ).

ಕೌರವ–ಪಾಂಡವರು—ಇನ್ನೂ ಬದುಕಿದಾರೆ ಎಂಬುದೇ ಹಳ್ಳಿಯವರನೇಕರ ಅನುಭವ.

ಖ

ಖರ್ಚು—ವರಮಾನಕ್ಕೆ ಸರಿಸಮಾನವಲ್ಲದ್ದು.

ಖಂಡಿತ—ಸ್ನೇಹಿತರು ಕಾಪಾಡುತ್ತಾರೆ, ದೇವರ ನೆರವುಂಟು, ನಂಟರು ಕಾಯುತ್ತಾರೆ, ಸಾಲ ಹಿಂದಕ್ಕೆ ಬರುತ್ತೆ, ಖಂಡಿತ–ಎಂಬ ನಂಬಿಕೆ ಎಲ್ಲ ಸುಳ್ಳು.

ಖಂಡಿತವಾದಿ– ಲೋಕವಿರೋಧಿ ; ನಮ್ಮ ಮಿತ್ರನಲ್ಲದಿದ್ದರೆ, ಈತನಿಗೆ ಮೂರ್ಖ ಎಂದು ಹೆಸರು.

ಖರದೂಷಣ—ಕೆಲವರನ್ನು ಕತ್ತೆ ಎಂದು ಬೈಯುವಾಗ ಕತ್ತೆಗಾಗುವ ಅವ-ಮಾನ.

ಖರಪತ್ರ—ಕತ್ತೆ ತಿಂಬ ಕಾಗದ.

ಖರಸ್ಪರ್ಶ—ಕೈಕೊಟ್ಟು ಮೋಸ ಮಾಡುವಾಗ.

ಖಾನಾವಳಿ—ಜಠರ ರೋಗಗಳಿಗೆ ಯಾವ ಔಷಧ ಉತ್ತಮ—ಎಂಬ ಜಾಹಿ-ರಾತಿಗೆ ಅವಕಾಶವಿಲ್ಲದ ಜಾಗ.

ಖಾಯಿಲೆ—ಕೆಲವರಿಗೆ ಇದು ಇದ್ದರೇನೇ ಆರೋಗ್ಯ; ಇದು ಮೊದಲಾದಾಗ ರೋಗಿಯನ್ನು ಕುರಿತ ಚಿಂತೆ, ಫೈಸಲಾದ ಕೂಡಲೇ ವೈದ್ಯನಿಗೆ ಕೊಡಬೇಕಾದ ಹಣವನ್ನು ಕುರಿತ ಚಿಂತೆ.

ಖಾರಾಗೃಹ—ಖಾರವನ್ನು ಹೆಚ್ಚು ಬಳಸುವ ಹೋಟಲು.

ಖಾಲಿ—ಸಾಮಾನ್ಯವಾಗಿ ಎಲ್ಲ ಬುರುಡೆಗಳಿಗೂ ಇದೇ ಸ್ಥಿತಿ.

ಖಾವಂತರು—ಗುಳಿ ತೋಡುವವರು, ಮಂದಿಯನ್ನು ಬೀಳಿಸಲು.

ಖುದಾಸೀನ—ದೇವರಿದಾನೆ ಎಂದು ಉದಾಸೀನವಾಗಿ ಕುಳಿತಿರುವುದು.

ಖೂಳು—ಖೂಳರುಂಬುವ ಕೂಳು.

ಖೇದ— ಹಯ ಸಿಂಹಗಳ ಗೋಳ್ಗುಕರೆ.

ಖೇದೋಕ್ತಿಜೀವನ—ಗೋಳು ಹೇಳಿಕೊಂಡು ಜೀವನದ ಖರ್ಚಿಗೆ ಚಂದಾ ವಸೂಲುಮಾಡಿ ಬದುಕುವ ರೀತಿ.

ಖೋ—ಉಬ್ಬಿ ಬೊಬ್ಬಿರಿಯುವಾಗಿನ ಸದ್ದಿನಂತೆ.

ಖೋತ—ನಮಗಿಂತ ಹೆಚ್ಚು ವರಮಾನ ಬರುವವರಿಗೆಲ್ಲ ಮಾಡಬೇಕಾದ ಶಾಸ್ತಿ.

## ಗ

ಗಗನರೋದನ—ರೇಡಿಯೋ ಸಂಗೀತ.

ಗಗನಾನಂದ—ಹಿಂದೆ ಪ್ರಖ್ಯಾತಿ ಹೊಂದಿದ ಒಬ್ಬರು ಮಾಸ್ತರು; ಈಗ ಸಾಮಾನ್ಯವಾಗಿ ಎಲ್ಲ ಮಾಸ್ತರುಗಳೂ ಗಗನವನ್ನೇ ನೋಡಿ ನಡೆಯು-ವರು.

ಗಂಗಾಯಮುನಾ—ಕಪ್ಪು-ಬಿಳುಪಾದ ಇಬ್ಬರು ಸೋದರಿಯರು.

ಗಜಗಮನೆ—ಒಂದೊಂದು ಹೆಜ್ಜೆಗೂ ಒಂದೊಂದು ಗಜ ದೂರ ಹೆಜ್ಜೆ ಇಡುವ ಹೆಂಗಸು.

ಗಜಗಜಾಂತರ—ಅಳತೆ ಮಾಡುವಾಗ ಗಜಗಜಕ್ಕೂ ಅಂತರ ಕಲ್ಪಿಸುವ ಚಾಕಚಕ್ಯತೆ.

ಗಜದಂತ—ಅಲಂಕಾರಕ್ಕೆ ಬೇರೆ, ಅಗಿಯುವುದಕ್ಕೆ ಬೇರೆ.

ಗಜದ್ಗುರು— ಆನೆ, ಒಂಟೆ ಇತ್ಯಾದಿ ಪ್ರಾಣಿಗಳನ್ನು ಪಡೆದು ಮೆರೆಯುವವ.

ಗಜೇಂದ್ರಭೋಗ—ಈ ಅಕ್ಕಿಯನ್ನು ಬೇಯಿಸಿ ತಿಂದರೆ ಆನೆಯಷ್ಟು ಬಲ ಬರುತ್ತದಂತೆ...ಬೇಯಿಸಿದರೆ ...ತಿಂದರೆ.

ಗಡ್ಡ—ಗಡ್ಡಕ್ಕೆ ಬೇರೆ ಸೀಗೆಕಾಯಿ ಎಂದಿದ್ದರೂ, ಸಾಮಾನ್ಯವಾಗಿ ಅದನ್ನೇ ಉಪಯೋಗಿಸುತ್ತಾರೆ. ಇದಕ್ಕೆ ಬೆಂಕಿ ಹತ್ತುವಾಗ ಹಪ್ಪಳ ಕಾಯಿ-ಸುವವರೂ ಉಂಟು.

ಗಡಿ—ಗಡಿಬಿಡಿಗಳಿಗೆಲ್ಲ ಮೂಲರೇಖೆ.

ಗಡಿಯಾರ—ಗಡಿತನಕ; ಕ್ರಿಕೆಟ್‌ನಲ್ಲಿ ಇದಕ್ಕೆ ನಾಲ್ಕು ರನ್ನುಗಳೆಂದು ಲೆಕ್ಕ; ಗಡಿಯಾರಗಳು ಪ್ರತಿಯೊಂದೂ ವ್ಯತ್ಯಸ್ತ; ಆದರೂ ಅವರವರು ಅವರ-

ವರದನ್ನೇ ಸರಿ ಎಂದು ನಂಬುತ್ತಾರೆ; ನಾಗರಿಕ ಜನರನ್ನು ಸ್ಥಳದಿಂದ ಸ್ಥಳಕ್ಕೆ ಓಡಿಸುವ ಚಾವಟಿ.

ಗಡಂ—ಅಸುಹೃತ್ ಸೇನೆಗೆ ಸಾಲನೋರ್ವನೆ ಗಡಂ.

ಗಂಡ—ಹೆಂಡತಿಯ ಹುಟ್ಟಿದ ಹಬ್ಬ ಯಾವತ್ತು ಎಂದು ನೆನಪಿನಲ್ಲಿಟ್ಟು ಕೊಂಡಿರುವ, ಆದರೆ; ಎಷ್ಟನೆಯದು ಎಂದು ಮರೆಯಬೇಕಾದ ವ್ಯಕ್ತಿ; ಸಾಕು ಪ್ರಾಣಿಗಳ ಪೈಕಿ ಅತ್ಯಂತ ಸಾಧುವಾದದ್ದು; ಗೃಹಸ್ಥಾಶ್ರಮದಲ್ಲಿ ತಪಸ್ಸು ಮಾಡುವ ಮುನಿ; ಮುಟ್ಟಿದರೆ ಮುನಿ, ಕುಟ್ಟಿದರೂ ಮುನಿ; "ಬಾಪ್ಪಕ್ಲಿನ್ನಾವಿಮೌ ಗಂಡೌ."

ಗಂಡಕೊಡಲಿ— ನಾವೇಕೆ ಕೊಡಬೇಕು, ಅವನೇ ಕೊಡಲಿ, ಎಂದು ತವರುಮನೆಯವರು ತಟಸ್ಥರಾಗುವಿಕೆ.

ಗಂಡಾಂತರ—ವಿಹಾಹವಿಚ್ಛೇದನ, ಹೆಂಗಸಿನ ದೃಷ್ಟಿಯಿಂದ.

ಗಂಡಿಕಾವಲಿ— ವಿಕೆಟ್‌ಕೀಪರ್ (ಕಿಟೆಲ್).

ಗಂಡುಕೂಸು– ಗಡ್ಡ-ಮೀಸೆ ಇಲ್ಲದ ಗಂಡಸು.

ಗಂಡುನರ್ಸುಗಳೂ—ರೋಗಿಗಳು ಬೇಗಬೇಗನೆ ಆಸ್ಪತ್ರೆಗಳಿಂದ ಹೊರಹೊರಡಲು ಉಪಾಯ.

ಗಂಡೋದರಿ—ಬಂಜೆ.

ಗತ್ಪುರುಷ— ಗೈರುತ್ತಿರುವ ಗಂಡು.

ಗದ್ಗದೆ—ಕೈನಡುಗುವವನು ಹಿಡಿದಿರುವ ಗದಾಯುಧ.

ಗದುಕು—ಮಾವನ ಮನೆಯಲ್ಲೇ ಉಳಿದಿರುವ ಅಳಿಯನ ಊಟ.

ಗಂಧರ್ವರು— ಪರಿಮಳದ್ರವ್ಯಗಳನ್ನು ಮಾರುವವರು.

ಗರ್ಭಶಯನ—ನಮ್ಮೆಲ್ಲರ ವೊತ್ತಮೊದಲನೆಯ ಅವಸ್ಥೆ.

ಗಮಕಕೋಲಾಕೋವಿದ—ಅನೇಕ ಗಮಕಕಲಾಕೋವಿದರು ಇಂಥವರೇ.

ಗಮಾರ—ನಮ್ಮಷ್ಟು ಷೋಕಿ ಅಲ್ಲದವ; ಎ ಬಿ ಸಿ ಡಿ ಇತ್ಯಾದಿ ಬರದವ; ಕಪಟವನ್ನರಿಯದವ.

ಗರಗಸ— ಗೊರಕೆಯ ಸದ್ದು.

ಗರಿಷ್ಠ—ಗರ್‍ರಿಷ್ಠೂಡಿದವ; ಶ್ರೇಷ್ಠ ಎಂದೆನಿಸಿಕೊಂಡವ.

ಗಲಾಟೆ—ಎಲ್ಲ ಬಗೆಯ ಗಲಾಟೆಗಳಿಗಿಂತಲೂ ಕಿವಿಗಿಂಪಾದ ಗಲಾಟೆಗೆ ಗಾನ ಎಂದು ಹೆಸರು.

ಗಲ್ಲಿ—ಕ್ರಿಕೆಟ್ ಆಟಗಾರರಲ್ಲಿ ಹಲವರು ಓಡಾಡುವ ಜಾಗ.

ಗವಾಯತ್—ಗವಾಯಿಗಳು ಮಾಡುವ ಕವಾಯತ್.

ಗರ್ವ—ಪರ್ವತವನ್ನೇರಿದಡೆ ಗರ್ವತನಗೇಕಯ್ಯ ? ಎಂದು ಸರ್ವಜ್ಞ ಕೇಳಿದರೂ, ಹಿಮಾಲಯದ ಶಿಖರಗಳನ್ನೇರಿದವರಿಗೆ ಗರ್ವ ತಪ್ಪದು. ಗರ್ವಗುಣಸಂಪನ್ನ ಸರ್ವಗುಣಸಂಪನ್ನನಾದರೇನು ಬಂತು ?

ಗರ್ವಿತಗರ್ವಣ—ಕೊಚ್ಚಿದ ಜಂಬವನ್ನು ಮತ್ತೆ ಮತ್ತೆ ಕೊಚ್ಚುವವ.

ಗಳಗಳ—ಹೊಳೆ ಸೊಗಯಿಸಬೇಕಾದರೆ, 'ಗಳಗಳನೆ ಗುಳುಗುಳಮೆನಿತುಂ' ಹರಿಯುತ್ತಿರಬೇಕು; ಅಳುವಿಗೂ ಹಾಗೆಯೇ.

ಗಾಂಜಾ—ಸ್ವರ್ಗಕ್ಕೆ ಇದೇ ಹತ್ತಿರದ ದಾರಿ.

ಗಾಜಿನಮನೆ—ಗಾಜಿನ ಮನೆಯಲ್ಲಿ ವಾಸಮಾಡುವವರು ಕಲ್ಲೆಸೆಯಬಾರದು, ನಿಜ; ಅವರು ಬೆತ್ತಲೆ ತಿರುಗಲೂ ಬಾರದು.

ಗಾಜು—ಕುರುಬರೂರಲಿ ಇದೇ ಮಾಣಿಕ್ಯ.

ಗಾಣ—ನೌಕರೀಜೀವನ; ಎಣ್ಣೆ ಬಂದಾಗ ಗಾಣ ಮುರಿಯಿತು; ಗಾನಕ್ಕೆ ಗಾಣವೆಂದು ಹೇಳುವುದೂ ಉಂಟು.

ಗಾಣಿಗ—ಏಣಾಂಕಧರನು ಧರೆಗಿಳಿಯಲು ಆವನಿಂದಲೂ (ಅಥವಾ, ಅವನ ವಾಹನದಿಂದಲೂ) ಗಾಣವಾಡಿಸುವವನು.

ಗಾಧಿ—ವಿಶ್ವಾಮಿತ್ರ ಸೃಷ್ಟಿ ನಡೆಸಿದವ.

ಗಾನನ—ಅರಣ್ಯರೋದನ.

ಗಾಮ—ಗಾಮಮಲ್ಲಂಗೆದುರೆ ಕಲಿಯುಗದ ವಾಮನನು ? (ಪು. ಸರಸ್ವತಿ).

ಗಾಯಕ—ಏನು ಸುಖಾ ? ಇದು ಏನು ಸುಖಾ ? ಎಂದು ಹಾಡಿ, ಗಾಯಪಡಿಸುವವನು.

ಗಾಯಕಲ್ಪ—ಮುಲಾಮು.

ಗ್ಲಾಳ—ರೂಪು, ಚೆಲುವು ಇಲ್ಲದಿದ್ದರೂ, ರಂಗಿನ ಮುಂದೆ....ಸಿಂಗ ಪೆಂಗನೇ.

ಗ್ರಾಳಿ—ತಾಪಸಿಗಳ ಆಹಾರಕ್ಕಾಗಿ ದೇವರು ನಿರ್ಮಿಸಿರುವ ಪದಾರ್ಥ; ಇಂಗ್ಲೀಷಿನಲ್ಲೂ ಗಾಳಿ ಎಂದೇ ಬರೆಯುತ್ತಾರೆ.

ಗಾಳಿಗೋಪುರ—ಇದನ್ನು ಕಟ್ಟಿ ಬ್ರಾಸಸಾನ್ ಮುಂತಾದ ಹೆಸರುಗಳನ್ನಿಡು-ತ್ತಾರೆ; ನಾವು ಮಾಡುವಾಗ ಖರ್ಚೇ ಬೀಳುವುದಿಲ್ಲ.

ಗ್ಯಾಸ್ಫೋಟನ—ವಿಷವಾಯುವಿನ ಆಸ್ಫೋಟನ.

ಗ್ರಾಮಕೀಟ—ಪುಟ್ ಲಾಯರ್; ಗ್ರಾಮಕಂಟಕ.

ಗ್ರಾಮನಿದ್ರೆ—ಋಗ್ವೇದದ ಕಾಲದಲ್ಲೂ ಗ್ರಾಮಗಳು ನಿದ್ರಿಸುತ್ತಿದ್ದವು.... 'ನಿಗ್ರಾಮೋಸೋ ಅವಿಕ್ಷತ'.

ಗ್ರಾಮಬೈರವ—ನ್ಯಾಯವಿಟ್ಟನ್ಯಾಯವ ಮಾಡುವ ನಾಯಿಗೆ ನರಕವು ತಪ್ಪೀತೆ? ಈತನಿಗೆ ಗ್ರಾಮಾಶ್ವ, ಗ್ರಾಮೇಶ್ವರ ಮುಂತಾದ ಹೆಸರುಗಳೂ ಇವೆ.

ಗ್ರಾಮಶಾಂತಿ—ನಾವುಂಡು ನಾವುಟ್ಟರೆ ಗ್ರಾಮಶಾಂತಿ.

ಗ್ರಾಮಸಿಂಹ—ಷಳ್ಳಿ ಪಶುಗಳನ್ನು ಬೆದರಿಸಿ ಬೆಳೆಯುವವ.

ಗ್ರಾಮಸುಖ—ನಿದ್ದೆ.

ಗ್ರಾಸ—ಇಂಗ್ಲೀಷಿನಲ್ಲಿ ಹುಲ್ಲು; ಆಹಾರ.

ಗಿಡ್ಡ—ಶ್ರೀಮಂತರ ಕೈ.

ಗಿಣಿ—ಗಿಣಿಯು ಹಾಗೆ ಸಾಕಲು ಖರ್ಚು ಹೆಚ್ಚು ತಗಲುವುದಿಲ್ಲ; ಆಸಾಮಿ ಕೂಡ ಹೆಚ್ಚುದಿನ ಬದುಕಿರಲಾರ.

ಗಿರಣ್ಯಾಕ್ಷ—ಗಿರಣಿ ಮಾಲೀಕ.

ಗಿರಿ—ಪದವಿ, ಅಧಿಕಾರ; ತಲೆಯ ಮೇಲೆ ಬಂದು ಕೂರುವ ಪರ್ವತ.

ಗುಗ್ಗುರಿ—ಮಕ್ಕಳ ಕೈಯಿಂದ ಮಾಣಿಕ್ಯವನ್ನಪಹರಿಸಲು ಇದನ್ನು ಉಪ-ಯೋಗಿಸುತ್ತಿದ್ದರೆಂದು ನಯಸೇನನು ಹೇಳುತ್ತಾನೆ.

ಗುಟ್ಟು—ಮೂವರ ಕಿವಿಗೆ ಮುಟ್ಟಿದ್ದು ಮೂರು ಲೋಕಕ್ಕೆ ಮುಟ್ಟುವುದು; ನಮ್ಮಿಂದ ಕಾಪಾಡಲಾಗದಿದ್ದರೆ, ತಕ್ಷಣ ಮತ್ತೊಬ್ಬರಿಗೆ ಹೇಳಿಬಿಡುವುದೇ ಮೇಲು.

ಗುತ್ಮಾಳ—ಗುಟ್ಟನ್ನು ರಟ್ಟುಮಾಡಿ ಕೆಲಸವನ್ನು ಹಾಳುಮಾಡುವವನು.

ಗುಡಾಕೇಶ—ನಿದ್ದೆಯಿಲ್ಲದೆ ಒದ್ದಾಡುವವ; ಪರೀಕ್ಷೆಗೆ ಓದುವ ವಿದ್ಯಾರ್ಥಿ, ಪರೀಕ್ಷೆಯ ಹಿಂದಿನ ವಾರದಲ್ಲಿ.

ಗುಡಿ—ದೇವರನ್ನೊಳಗಿರಿಸಿ ಬಾಗಿಲು ಭದ್ರಪಡಿಸುವ ಜಾಗ; ಗುಡಿ ಗುಡಿ ಸೇವಿಸುವವರ ನೆಲೆವೀಡು; ಇದರ ಧರ್ಮದರ್ಶಿಯಾಗಲು ಧರ್ಮಿಷ್ಠ-ನಾಗಬೇಕೆಂದಿಲ್ಲ; ಇಲ್ಲಿಯ ದೇವರಿಗೆ ವರಕೊಡುವವನು ಪೂಜಾರಿ.

ಗುಡಿಸಲು—ಗುಡಿಸಲು ಜಾಗವಿಲ್ಲದ ಸ್ಥಳ.
ಗುಡುಗು—ಒಂದು ಬಗೆಯ ಭಾಷಣ.
ಗುಡ್ಡ—ಕುಳ್ಳ; ಎತ್ತರವಾಗಿದ್ದಷ್ಟೂ ತಲೆಗೆ ಬಡಿಯುವುದು ಸಂಭವ.
ಗುಡ್ಡಹರಟೆ—ಸರಸವಾದ ಒಳ್ಳೆಯ ಹರಟೆ .
ಗುದ್ದಲಿ—ಗುದ್ದಲಿಗೆ ಹೊನ್ನ ಹಿಡಿ ಏಕೆ? ಆದರೂ, ಅನೇಕರು ಅಂಥ ಪೆನ್ನುಗಳನ್ನೇ ಬಯಸಿ ಬಳಸುವರು.
ಗುದ್ದಾಮಕವಿ—ಎಲ್ಲ ವಿಮರ್ಶಕರ ಕೈಯಿಂದ ಗುದ್ದಿಸಿಕೊಂಡ ಕವಿ.
ಗುದ್ದು— ಬಗ್ಗಿದವನಿಗೆ ಒಂದು ಗುದ್ದು ಹೆಚ್ಚು.
ಗುದ್ದುಗೆ—ಸೈನ್ಯಬಲದಿಂದ ಪ್ರಜೆಗಳನ್ನು ಹೆದರಿಸಿ ಅವರ ಧೈರ್ಯವನ್ನು-ಡುಗಿಸಿ ಆಳುವ ಅರಸು.
ಗುದ್ಯೋಗ—ಸಾಮಾನ್ಯರನ್ನು ಹಿಂಸಿಸಿ ಅವರಿಗೆ ಅಪ್ರಿಯವಾದದ್ದನ್ನು ಅವ-ರಿಂದ ಮಾಡಿಸುವ ನೌಕರಿ.
ಗುದ್ರಾಂಕಿತ—ಟಪಾಲಾಫೀಸಿನಲ್ಲಿ ಮುದ್ರೆ ಹೊಡೆಯಿಸಿಕೊಂಡ ಪತ್ರ.
ಗುಪ್ತನಾಮ—ಕವಿಗಳು ಗುಪ್ತನಾಮವನ್ನಿಟ್ಟುಕೊಳ್ಳುವುದುಂಟು. ಆದರೆ ಅದು ಆ ಹೆಸರಿನವರಿಗೆ ತುಂಬ ಅನ್ಯಾಯ.
ಗುಬ್ಬಚ್ಚಿ—ಇದರ ಮೇಲೆ ಬ್ರಹ್ಮಾಸ್ತ್ರ ಪ್ರಯೋಗಿಸುವುದು ಅನ್ಯಾಯ, ಅನಾವಶ್ಯಕ.
ಗುಮಾಸ್ತೆ—ಸಂಬಳದಲ್ಲಿ ಬಿದ್ದೊದ್ದಾಡುವ ನೊಣ.
ಗುರ್— ಚೊಕ್ಕಟದ ತೇಜಿಯನು ಗುರ್ರೆಂಬ ತೆಲುಗ (ಸರ್ವಜ್ಞ).
ಗುರ್‌ಗುರ್‌ಬತ್ತಿ—ದೀಪಾವಳಿಗೆ ಬಂದ ಅಳಿಯ ಹೊರಡಲೇಬೇಕೆಂದಾಗ, ಆಕೆ ಹಾರಿಸುವ ಚಟಾಕಿ.
ಗುರಿಕಾರರು—ಗುರಿಯನ್ನು ಬಲ್ಲವರು; ಅದನ್ನು ಮುಟ್ಟಲು ದಾರಿ ತಿಳಿದವರು.
ಗುರುಕ್ರತುಃ—ವಿದ್ಯಾ ಇಲಾಖೆಯ ಮುಖ್ಯ ಕೆಲಸ.
ಗುರುಕ್ಷೇತ್ರ—ಮಹಿಳೆಯರ ಕಾರ್ಯಕ್ಷೇತ್ರ.
ಗುರುಬತ್ತಿ—ಹಲವು ಶಿಷ್ಯರ ಪೀಡಾಕ್ರಮ.
ಗುಲ್ಬಣಸ್ಥಿತಿ—ಗುಲ್ಲು ಉಲ್ಬಣಸ್ಥಿತಿಗೆ ಬಂದಾಗ.
ಗುಲಗಂಜಿ—ಹೊನ್ನನ್ನು ತೂಗಿ ಅಪಮಾನಪಡಿಸಲು ಅಕ್ಕಸಾಲಿಗರು ಉಪ-

ಯೋಗಿಸುವ ಕ್ಷುದ್ರವಸ್ತು.

ಗುಲಾಮ—ರಾಜಾರಾಣಿಯರಿಗಿಂತ ಈತನೇ ಪ್ರಭಾವಶಾಲಿ—ಇಸ್ಪೀಟ್ ಆಟದಲ್ಲಿ.

ಗೂಬೆ–ಕವಿ ಕಾಣದ್ದನ್ನೂ ರವಿ ಕಾಣದ್ದನ್ನೂ ಕಾಣಬಲ್ಲವ; "ಗೂಸು ಬೆನ್ನಿ"ನ ಮುದುಕರನ್ನು ಹೀಗೆ ಅವಹೇಳನ ಮಾಡುವ ವಾಡಿಕೆ.

ಗೃಧ್ರಭೂಮಿ—ಗೃಧ್ರಗಳಿಗೆ ಹೆಚ್ಚು ಪುರಸ್ಕಾರ ದೊರೆಯುವ ರಾಜ್ಯ.

ಗೃಹಕೈಗಾರಿಕೆ—ಶಿಶುಗಳ ತಾಡನ.

ಗೃಹದಾರಣ್ಯಕ—ಮನೆಯಲ್ಲಿದ್ದರೂ, ತಾಪತ್ರಯಗಳ ದೆಸೆಯಿಂದ, ವನದಲ್ಲಿರುವಂತೆ ದಾರಿಕಾಣದೆ ತತ್ತರಿಸುವಿಕೆ.

ಗೃಹಸ್ಥ— ಸರ್ಕಾರ, ಸಂಸಾರ ಎರಡನ್ನೂ ನಡೆಸುವ ಧೀರ; ಸಂನ್ಯಾಸಿಗಳಿಗೆಲ್ಲ ಆಧಾರಸ್ತಂಭ; ಒಂದು ಬಗೆಯ ಮೂಕಪ್ರಾಣಿ; ಇಹೈವ ಫಲಮಶ್ನುತೇ ಎಂಬಂತೆ ಫಲವನ್ನನುಭವಿಸುತ್ತಿರುವವ.

ಗೃಹಸ್ಪತಿ— ಜಾಣತನದಿಂದ ಗೃಹಸ್ಥ ಜೀವನವನ್ನು ನಡೆಸುವವ.

ಗೃಹಿಣೀ—ಗೃಹಿಣೀ ಗೃಹಮುಚ್ಯತೇ; ಭಿಕ್ಷುಕರನ್ನು ಹೊರದೂಡಿ ಹೊರಬಾಗಿಲನ್ನು ಹಾಕುವ ಅಧಿಕಾರ ಈಕೆಯದೇ.

ಗೆದ್ದಲು— ಅಮರವಾದದ್ದನ್ನೆಲ್ಲ ತಿಂದುಹಾಕುವ ಜಂತು, ತಾಪಸಿಗಳ ಪಾದಕ್ಕೆ ಮಣ್ಣು ಮೆತ್ತುವ ಭಕ್ತವೃಂದ; ಸಮಾಜದ ಸಮಷ್ಟಿ ಹಿತಕ್ಕಾಗಿ ಪ್ರತಿ ಒಬ್ಬ ವ್ಯಕ್ತಿಯೂ ದುಡಿದು ಮಡಿಯುವ ಪ್ರಾಣಿಸಮೂಹ; ಶಿಸ್ತು, ಸಂಯಮ, ಸಮಾಜಸೇವೆ ಇವುಗಳಲ್ಲಿ ಎಲ್ಲರಿಗಿಂತ ಮುಂಬರಿದಿರುವ ಪ್ರಾಣಿ.

ಗೊಂಬೆ ಆಟ—ಬಹುಮಂದಿಯ ಬದುಕಿನ ದಾರಿ.

ಗೊಳೋ—ಕನ್ನಡಿಗರು ಗೊಳೋ ಎಂದು ಅಳುವವರು ಎಂಬ ಪ್ರತೀತಿ ಇದೆ.

ಗೋಘ್ನ— ಅತಿಥಿ; ಹಾಲುಮಾರುವವ; ಗೌಳಿಗ.

ಗೋಡೆ— ಅಶ್ಲೀಲ ಸಾಹಿತ್ಯದ ಪ್ರಚಾರಕೇಂದ್ರ; ಸಿನಿಮಪ್ರಚಾರದ ಆಧಾರ; ಪರಸ್ಪರ ದೂಷಣೆಗಳಿಗೂ, ಪಕ್ಷ ಪ್ರತಿಪಕ್ಷಗಳ ಘೋಷಣೆಗಳಿಗೂ ಒದಗುವಂತೆ ಕಟ್ಟಿ ತಯಾರಿಸಿದ ಜಾಹೀರಾತು ಜಾಗ.

ಗೋದಾನ—ಒಂದು ಬಗೆಯ ಕ್ಷೌರ.

ಗೋಧಿ— ವ್ಹಿಸ್ಕಿಯನ್ನು ತಯಾರಿಸಲು ಹಲವು ರಾಷ್ಟ್ರಗಳು ಇದನ್ನೇ ನಂಬಿ-ಕೊಂಡಿರುವರು.

ಗೋಧಿಕಲ್ಲುಶಾಸ್ತ್ರ— ಹಾರುವ ಪ್ರಾಣಿಗಳ ಕುತ್ತಿಗೆಗೆ ಗೋಧಿಕಲ್ಲನ್ನು ಕಟ್ಟಿ ತಮಾಷೆ ನೋಡುವ ಸಂಪ್ರದಾಯ.

ಗೋಧೂಳಿ ಮುಹೂರ್ತ—ಕಾರ್ಖಾನೆ ಕೆಲಸಗಾರರೂ, ಕಚೇರಿ ನೌಕರರೂ ಮನೆಗೆ ಹಿಂತಿರುಗುವ ಲಗ್ನ.

ಗೋಪಾಳ—ಅಳಿಯ ಭೋಜನಕ್ಕಿಂತ ಗೋಪಾಳವೇ ಲೇಸು, ಅಭಿಮಾನಿಗಳಿಗೆ.

ಗೋಮುಖ—ದುಷ್ಟರು ವೋಟಿಗಾಗಿ ಬರುವಾಗ ಧರಿಸುವ ಮುಖ; ನೆರೆಹೊರೆಯ ರಾಷ್ಟ್ರಗಳು ಗೋವುಗಳಂತಿದ್ದರೂ, ಪರಸ್ಪರ ಸಂಧಿಸುವಾಗ, ವ್ಯಾಘ್ರಮುಖಗಳನ್ನೇ ಧರಿಸಿ ಹೆದರಿಸುತ್ತವೆ.

ಗೋರಿಹಾಡು—ಎರಲೆಗೆ ಪಾಡುವ ಗೋರ್ರಿಹಾಡನ್ನು ಅರಣ್ಯದೊಳಗಿರುವ ಮೃಗವಿರೋಧಿಗಂ ಪಾಡಲಾಗದು, ಎಚ್ಚರಿಕೆ.

ಗೋಲಿ—ಸಣ್ಣ ಹುಡುಗರೂ, ದೊಡ್ಡ ಯೋಧರೂ ಆಟಕ್ಕಾಗಿ ಉಪ-ಯೋಗಿಸುವ ಪದಾರ್ಥ.

ಗೋಲೀಗೋಪುರ— ಗೋಲಿಬಾರಿಸಿ, ಶಾಂತಿ ನೆಲೆಸಿಬಿಡಬಹುದೆಂದು ಹಲ-ವರು ಕಾಣುವ ಕನಸು.

ಗೋಲು—ಗೋಲಿಗೆ ನಿದ್ದೆ ಬಂದಾಗ, ಗೋಲು ಖಂಡಿತ.

ಗೋಷಾ—ಇನ್ನೂ ಅನೇಕ ಮಹಿಳೆಯರು ಅನುಸರಿಸಬಹುದಾದ ಒಂದು ಪದ್ಧತಿ.

ಗೋಷಾಯಾತ್ರೆ—ಹಲವು ದೇಶಗಳಲ್ಲಿ ಮಹಿಳೆಯರು ಹೊರಟಾಗ.

ಗೋಸುಂಬೆ— ಗೊದ್ದ ಬದುಕಿದರೆ ಗೋಸುಂಬೆ; ಆದರೆ, ಗೋಸುಂಬೆ ಮಾತ್ರ ಬದುಕುವ ಹಾಗೆಯೇ ಇಲ್ಲ; ಪಾಪ, ಅದನ್ನು ಕಲ್ಲು ಹೊಡೆದು ಸಾಯಿಸಿ ಬಿಡುತ್ತಾರೆ; ಎಷ್ಟು ಸಲ ಎಷ್ಟು ಬೇಗ ಬಹುಲಾಯಿಸಿದರೂ ಅದರ ಬಣ್ಣ ಬಯಲಾಗಿ ಬಿಡುತ್ತದೆ.

ಗೋಳಾಧ್ಯಾಯ— ಸಿದ್ಧಾಂತಶಿರೋಮಣಿಯಲ್ಲಿನ ಈ ಅಧ್ಯಾಯವನ್ನು ಕಲಿ-ಯುವುದು ಬಹಳ ಕಷ್ಟವಂತೆ.

ಗೋಳೋ— ಫುಟ್‌ಬಾಲ್ ಆಟದಲ್ಲಿ ಗೋಲು ಹೊಡೆಸಿಕೊಂಡಾಗ, ಗೋಳೋ ಗೋಳು.

ಗೌಡ— ಹಾಳೂರಲ್ಲಿ ಉಳಿದವನೇ ಗೌಡ, ಎಂದಿದ್ದರೂ ಹಾಳೂರಲ್ಲಿ ಒಬ್ಬರೂ ಉಳಿಯಲು ಆಸೆಪಡುವುದಿಲ್ಲವೇಕೆ ?

ಗೌಢ್ಯ—ಮೌಢ್ಯ ಎಂಬುದನ್ನು ಗಮನಿಸಿ, ಇದರ ಅರ್ಥ ತಿಳಿದುಕೊಳ್ಳಬಹುದು.

ಗೌಡರೀತಿ—ವೀರ್ಯ ತುಂಬಿದ ಪದಹೇಳುವ ರೀತಿ.

ಗೌಡವ್ಯವಹಾರನಿರ್ಣಯ—ಒಂದು ಹಳೆಯ ಗ್ರಂಥ; ಈಗ ಉಪಯೋಗಕ್ಕೆ ಬಂದೀತು.

ಗೌರವ—ಎಷ್ಟು ಆಳುಗಳನ್ನು ತನ್ನ ಕೆಲಸಕ್ಕಿರಿಸಿಕೊಂಡಿದ್ದಾನೆ ಎಂಬುದರ ಮೇಲೆ ಇದನ್ನು ನಿರ್ಧರಿಸಿ ಸಾರುವುದು ವಾಡಿಕೆ.

ಗೌರವಸ್ಥ—ದುಡಿಯದೆ ಸುಖಪಡುವವ.

ಗ್ರಂಥ—ಕಟ್ಟಿ ಮಡಗಬೇಕಾದದ್ದು.

ಗ್ರಂಥಕರ್ತ—ಈತ ಗಮನಿಸಬೇಕಾದದ್ದು ಮೂರು— ಹೆಸರು, ಸಮರ್ಪಣ, ಮುನ್ನುಡಿ. ಉಳಿದದ್ದು ಹೇಗಾದರೂ ಇರಲಿ.

## ಘ

ಘಟಾಟೋಪಃ—ಮಾತು, ಭಾಷಣ.

ಘಟಸ್ಥಾಪನ—ಕೂರುವುದು.

ಘಟಾನುಘಟಕೋಲೋಕ—ಒಬ್ಬ ಗಟ್ಟಿಗ ಎನಿಸಿಕೊಂಡರೆ ಅವನ ದಾರಿಯನ್ನೇ ಹಿಡಿದು ಇತರರೂ ಅವನಂತೆಯೇ ಮೋಸಮಾಡಲು ಕಲಿಯುವುದೇ ಲೋಕರೂಢಿ.

ಘಟೋತ್ಕಚ—ಘಟವಾದ್ಯಪ್ರವೀಣ.

ಘನ—ಭಾರತ ರಾಜ್ಯಾಂಗ ಶಾಸನದಂತೆ.

ಘನಸೂಯೆ—ಘನವಾದ ಅಸೂಯೆ.

ಘಾತುಕ—ಇದ್ದ ಪಕ್ಷವನ್ನು ತೊರೆದು ಬೇರೊಂದನ್ನು ಕಟ್ಟುವವ.

ಘುಣಾಕ್ಷರ—ಗ್ರಂಥಕೀಟವೆನಿಸಿಕೊಂಡವನ ಕೊರವಣಿಗೆ.

ಘಂಟಕಾಯಕ—ವ್ಯಾಸ್ಪುರ ಕೆಲಸ.

ಘೃತಂ— ಋಣಂ ಕೃತ್ವಾ ಘೃತಂ ಪಿಬೇತ್; ಕೆಟ್ಟ ತುಪ್ಪವಾದರೆ ಸಾಲವನ್ನು ತೀರಿಸಬೇಕಾಗಿಲ್ಲ ಎಂಬ ಅನುಕೂಲವಿದೆ.

ಘೃತಘ್ನ—ತುಪ್ಪ ಬಡಿಸಿದವರ ಮನೆ ತಪ್ಪು ಎಣಿಸುವವ.

ಘೃತಮತಿ—ಸಾಲ ಮಾಡಿಯಾದರೂ ತುಪ್ಪವನ್ನೇ ಹೊಡೆಯಬೇಕೆಂಬ ಬದ್ಧಿ.

ಘೃತಾಂತ—ತುಪ್ಪದ ಮಡಕೆಯನ್ನೊಡೆದವ.

ಘ್ರಾಣಾಯಾಮ—ಒಗ್ಗರಣೆಯ ಕಡೆಗೆ ಮೂಗೆಳೆಯುವ ಚಟ.

ಚ

ಚಕ್ಕಳ—ಇದನ್ನೂ ಮಕ್ಕಳೀಗೂ ಹಾಕಿ ಕೆಲವರು ಮಹಾನುಭಾವರು ಆರಾಮವಾಗಿ ಕುಳಿತುಕೊಳ್ಳುತ್ತಾರೆ.

ಚಕ್ರಬಡ್ಡಿ—ಬಡ್ಡಿಗೇ ಚಕ್ರ ಬೀಳಿಸುವ ಕ್ರಮ.

ಚಕ್ರವಾಕ—ವಾಕ್‌ಗೆ ಚಕ್ರಸುತ್ತುವವನು; ನುಡಿದಂತೆ ನಡೆಯದವ.

ಚಕ್ರಾಯುಧ—ಸಮಯಕ್ಕೆ ಚಕ್ಕರ್ ಕೊಡುವುದರಿಂದಲೇ ಕೆಲಸ ಮಾಡುವುದನ್ನು ತಪ್ಪಿಸಿಕೊಳ್ಳುವ ಉಪಾಯ.

ಚಕ್ಷುಃಶ್ರವಸ್—ಹಾವು; ಹಾವಿಗೆ ಕಿವಿ ಇಲ್ಲವೆಂಬುದನ್ನು ನಮ್ಮ ಪೂರ್ವಿಕರೂ ಅರಿತಿದ್ದರೆಂಬುದಕ್ಕೆ ನಿದರ್ಶನ.

ಚಂಗ್ಯಮಂಗ್ಯತನ—ಚ್ಯಂಗ್ ಮಂಗ್ ಇತ್ಯಾದಿ ಚೈನಿ ಮಾಡುವುದು.

ಚರ್ಚಸ್ವಿ—ಚರ್ಚೆಯಲ್ಲಿ ವರ್ಚಸ್ಸು ತೋರಿದವ.

ಚರ್ಚರಿತ—ಚರ್ಚೆ ನಡಿಸಿ ನಡಿಸಿ ಬೇಜಾರುಪಡಿಸಿದ ಒಂದು ವಿಷಯ.

ಚರ್ಚಿತಚರ್ಚಣ— ಸಮಿತಿ ಶಾಸ್ತ್ರಕ್ಕೆ ಸಂಬಂಧಿಸಿದ್ದು.

ಚರ್ಚೆ—ಹೇಳಿದ್ದನ್ನೇ ಹೇಳುವುದು.

ಚಟಾಕಿ—ಹಾಸ್ಯದ ಚಟಾಕಿಗಳನ್ನು ಯಾರ ಮೇಲೆ ಎಸೆದರೂ ಅದು ತಮಗೇ ತಾಕುತ್ತದೆ ಎಂದು ಹಲವರು ರೇಗುವುದುಂಟು.

ಚಟುವಟಿಕೆ— ಚುನಾವಣೆಗಳಿಗೆ ಮೊದಲು ಹಲವರಲ್ಲಿ ಕಂಡುಬರುವ ಕ್ಷಣಿಕವಾದ ಉತ್ಸಾಹ.

ಚಂಡೀರಹಸ್ಯ— ವಿಪರೀತವನ್ನೇ ಮಾಡಹೇಳುವುದು.

ಚತುರ್ಥೀಕರ್ಮ—ಚಂದ್ರನನ್ನು ನೋಡುವುದು.

ಚತುರ್ಭುಜ—ಮಕ್ಕಳೊಂದಿಗರಿಗೆ ಇದಿದ್ದರೆ ಅನುಕೂಲ.

ಚತುರಾನನ— ಮುಖ ನೋಡಿದರೆ ಈತ ಜಾಣ ಎಂಬ ತಪ್ಪು ಭಾವನೆಯ‌ನ್ನುಂಟುಮಾಡುವವ.

ಚತುಶ್ಶಾಖಾ— ಎರಡು ಕೈ, ಎರಡು ಕಾಲು.

ಚತುಷ್ಪಾದ— ನಾವೆಲ್ಲರೂ ಒಂದಾನೊಂದು ಕಾಲದಲ್ಲಿ ಹೀಗೆಯೇ ತೆವಳುತ್ತಿದ್ದೆವು.

ಚದುರ—ಉಂಡುಂ ಉಣದವೊಲಿರ್ಪವಾತ.

ಚಂದ್ರ— ಹಸಿದವನಿಗೆ ಹಪ್ಪಳ, ಎರಡು ಹೊಡೆದವನಿಗೆ ಎರಡು, ಇತ್ಯಾದಿ ತೋರುವ ಏಕಂ ಸತ್. ಷೆಲ್ಲಿಗೆ ನಿರಾಶೆಯ ತವರುಮನೆ, ಕೀಟ್ಸಿಗೆ ಸೌಂದರ್ಯದ ಅಧಿದೇವತೆ.

ಚಂದ್ರಹಾಸ— ಸೂರ್ಯಹಾಸದ ಪ್ರತಿಬಿಂಬ.

ಚಂದಾಪಟ್ಟಿ—ಇಲ್ಲ ಎಂದು ಹೇಳಲು ಧೈರ್ಯವಿಲ್ಲದವರ ನಾಮಾವಳಿ.

ಚಂದಾವಸೂಲಿ—ಆಧುನಿಕ ಹಿಂಸಾಕ್ರಮಗಳಲ್ಲೊಂದು.

ಚಪಲಂ—ಕಪಿಗೆ ಚಪಲತೆ ಸಹಜಂ; ಆದ್ದರಿಂದಲೇ ಅದರ ಸಂಟರಾದ ನಮಗೂ ಅದು ಹತ್ತಿರುವುದು.

ಚಪ್ಪಾತಿ— ಒಂದು ಬಗೆಯ ಕೃತಕ ರಬ್ಬರ್; ಗೃಹಕೈಗಾರಿಕೆ.

ಚಪ್ಪಾಳೆ—ಒಂದು ಮಾದಕ ವಸ್ತು.

ಚಮಚ—ಕೈಯಿಂದ ಮುಟ್ಟಲು ಅಸಹ್ಯವಾದ ವಸ್ತುಗಳನ್ನು ಬಾಯಿಗೆ ರವಾನಿಸಲು ಒದಗುವ ಉಪಕರಣ.

ಚರ್ಮ—ಇದನ್ನು ಪ್ರೈಮರಿ ಶಾಲಾಮಾಸ್ತರುಗಳನೇಕರು ಹದಮಾಡಿಕೊಡುವರು.

ಚರ್ಮಚಿತ್ರ—ತೊನ್ನು.

ಚರ್ಮವಂತ—ಶಕುನಿಯ ತಮ್ಮ.

ಚರಕತಂತ್ರ—ನೂಲು ತೆಗೆಯುವ ಉಪಾಯ.

ಚರಣಾಗತ—ಕಾಲಿಗೆ ಬಿದ್ದವ.

ಚರಮಗೀತೆ— ಸತ್ತವರಿಗೆ ಸಂತಾಪ; ಸಾಯುವ ಮೊದಲೇ ಬರೆದಿಡುವುದೇ ಜಾಣತನ; ಚರಮಗೀತೆಗಳನ್ನು ಗಮನಿಸಿದರೆ, ಇದುವರೆಗೂ ದುರ್ಜನ-

ರೊಬ್ಬರೂ ಸತ್ತಿರುವಂತೆ ತೋರುವುದಿಲ್ಲ.

ಚಿರಸ್ವತ್ತು— ಹೆಂಡತಿ.

ಚರಿತ್ರೆ—ಆದದ್ದಾಗಿಹೋಯ್ತು, ಅದನ್ನು ಇನ್ನು ಬದಲಾಯಿಸುವಂತಿಲ್ಲ- ಎಂದು ಒಪ್ಪಿಕೊಂಡು ಸುಮ್ಮನಿರದೆ ಹಲವರು ಆದದ್ದನ್ನೆಲ್ಲ ಬದಲಾಯಿಸಿ ಬರೆದಿರುವ ಗ್ರಂಥ; ಇಂದಿನವರ ಮೂಗಿನ ನೇರಕ್ಕೆ ಕಾಣುವ ಹಿಂದಿನವರ ದಾರಿ.

ಚಹ—ಕಾಷಾಯ ತೊಡಲು ಪ್ರೇರೇಪಿಸುವ ಒಂದು ಬಗೆಯ ಕಷಾಯ; ಕಾಫಿ ಮಾಡುವುದಕ್ಕೆ ಚೆನ್ನಾಗಿ ಬರದ ಜನ ಇದನ್ನೇ ಕುಡಿಯುತ್ತಾರೆ.

ಚಹಕರಿಸು— ಚಹೋಪಚಾರ ಏರ್ಪಡಿಸುವುದು.

ಚಳಿ—ಬೆಟ್ಟಕ್ಕೆ ಚಳಿಯಾದೊಡೆ ಏನಹೊದ್ದು ಏರಯ್ಯ ಎಂಬುದು ಇನ್ನೂ ಪ್ರಶ್ನೆಯಾಗಿಯೇ ಉಳಿದಿದೆ.

ಚಾಡಿ—ಖಾಲಿ ಬುರುಡೆಗಳಿಗೆ ಕಿವಿಯ ಮೂಲಕ ತುಂಬಬಹುದಾದ ವಿಷ.

ಚಾತಕಪಕ್ಷಿ—ಕವಿಗಳ ಚಿದಾಕಾಶದಲ್ಲಿ ಚಿಮ್ಮುವ ಹಕ್ಕಿ.

ಚಾಮರ—ಕನ್ನಡನಾಡಿನ ಮೂಲೆಮೂಲೆಗಳ ಮನೆಗಳ ಮೂಲೆಮೂಲೆಯಲ್ಲಿಯೂ ಇರುವುದು.

ಚಾಳೀಸ್— ತಿಂಗಳಿಗೆ ನಲವತ್ತು ರೂಪಾಯಿಗೆ ಮೇಲ್ಪಟ್ಟು ಸಂಬಳ ಬರುವವರಿಗೆಲ್ಲ ತಗಲುವ ಒಂದು ತೆರನ ದೃಷ್ಟಿಮಾಂದ್ಯ; ಹಿರಿಯಕ್ಕನ ಚಾಳೀಸ ಮನೆಮಕ್ಕಳಿಗೆಲ್ಲ.

ಚಿತ್ರಕಾರ— ಚಿತ್ರಕಾರನನ್ನೇ ತೂಗುವ ಬದಲು ಕೆಲವು ವೇಳೆ ಅವನು ಬರೆದ ಚಿತ್ರವನ್ನು ತೂಗಿ ಮಾನಭಂಗಮಾಡುತ್ತಾರೆ.

ಚಿತ್ರವಧೆ— ಹಲವು ಸಂಸ್ಥೆಗಳಿಂದ ಚಿತ್ರ ತಯಾರಿಕೆ.

ಚಿತ್ರವೃತ್ತಿ—ಸಿನಿಮಾತಾರೆಯರ ಜೀವನದ ದಾರಿ.

ಚಿತ್ರಹಿಂಸೆ— ಸಿನಿಮಾ ನೋಡುವವರಿಗಾಗುವ ಹಿಂಸೆ.

ಚಿತ್ರಾಂಗದೆ— ಚಲಚ್ಚಿತ್ರಗಳನ್ನು ಕಟುವಾಗಿ ಟೀಕಿಸುವವ.

ಚಿನ್ನ—ಕಲಹದ ಹೆಬ್ಬೇರು; ಮಾನಿನಿಯರ ಹೃದಯ.

ಚಿಪ್ಪು—ಇದು ಖಾಲಿಯಾಗಿರುವ ಜನ ಇದನ್ನೇ ಹಿಡಿದು ತಿರುಗಬೇಕಾಗುವುದು.

ಚಿರಋಣಿ— ಸಾಲವನ್ನು ಕೊಟ್ಟು ತೀರಿಸದವನು.

ಚಿರಕಾರಿ—ಗುಮಾಸ್ತೆ; ಕಾರಕೂನ.

ಚಿರಂಜೀವಿ—ಜನ್ಮ, ಮೃತ್ಯು, ಜರಾ ರೋಗಗಳ ಗುಟ್ಟನ್ನರಿಯದವ.

ಚಿಲ್‌ಚಿಲ್ರೆನೌಜವಾನ್—ತರುಣವೃಂದ.

ಚೀರ್ತನೆ—ಕೆಟ್ಟ ಶಾರೀರದವರು ಮಾಡುವ ಕೀರ್ತನೆ.

ಚೀರುವುದು— ಚೀರ್ಸ್ ಕೂಗುವುದು.

ಚಟ್ಟ— ತರಗೆಲೆಯ ಸುರುಳಿ, ನವತಾರುಣ್ಯದ ಗುರುತು.

ಚುನಾವಣೆ— ಎದುರು ಪಕ್ಷದವರನ್ನು ಹೀಯಾಳಿಸಲು ಸುಯೋಗ; ಬಣ್ಣ ಬಯಲಾಗುವ ದಿನ; ನಮ್ಮನ್ನೆಲ್ಲ ಬಾಂಧವರೆ, ಮಹನೀಯರೆ, ಬುದ್ಧಿವಂತರೆ, ದೇಶಪ್ರೇಮಿಗಳೆ, ಗೆಳೆಯರೆ ಎಂದು ಹಲವರು ಸಂಬೋಧಿಸಿ ಸ್ತೋತ್ರಮಾಡುವ ಸುದಿನ; ಮಹಾಸಂಕಲ್ಪ ಮಾಡುವುದರೊಳಗೆ ಮಹಾಚುನಾವಣೆ ಮತ್ತೆ ಬಂತು (ಗಾದೆ); ಒಂದೇ ದೇಶದ ಜನರು ಒಬ್ಬರಿಗೊಬ್ಬರು ಹೊಡೆದಾಡಿದರೆ ಅದಕ್ಕೆ ಚುನಾವಣೆ ಎಂದು ಹೆಸರು.

ಚೂಪುನಖಿ—ಇಂಥವರನ್ನು ಮದುವೆಯಾಗದಿರುವುದೇ ಕ್ಷೇಮ.

ಚೂರಸಿ—ಮುರಿದ ಕತ್ತಿ.

ಚೆಕ್ಕಂದ— ಚೆಕ್‌ನಿಂದಾದ ಚಕ್ಕಂದ.

ಚೆಂಡಿಗ—ದಾಂಡಿಗನ ಕಡೆ ಚೆಂಡನ್ನೆಸೆಯುವವ.

ಚೆಪುರೋಪಾಯ—ಪೋಲೀಸರು ಕಾಣಿಸಿಕೊಂಡಾಗ.

ಚೆನ್ನಿಗ—ಪೆನ್ನಿಗ, ಬೆನ್ನಿಗ ಎಂಬಂತೆ.

ಚೆಲ್ಲಿದ—ಚೆಲ್ಲಿದ ಹಾಲಿಗೆ ಅಳಬೇಕಾದ್ದಿಲ್ಲ; ಅದು ಬರಿಯ ನೀರು ಎಂಬುದನ್ನು ನೆನಪಿಗೆ ತಂದುಕೊಳ್ಳಿ.

ಚೇರನ್—ಅರುಣಂ ಮಾಸೆ ಚೇರನಕ್ಕುಂ (ಮಂಗರಾಜ).

ಚೇರ್ಮನ—ಅಧ್ಯಕ್ಷಸ್ಥಾನ.

ಚೈನಿ—ಅಫೀಮುಸೇವಕ; ಸುಖಭೋಗಿ.

ಚೊಕ್ಕಟ—ಅಳಿಯದೇವರು ಹೊಕ್ಕಮನೆ; ಏಕೆಂದರೆ, ಅಳಿಯ ಮನೆ ತೊಳೆಯ, ಎಂದಿದೆ.

ಚೊಂಯಿ—ಎರಡು ಚೊಂಯಿಗೆ ಒಂದು ದೋಸೆ (ಗಾದೆ).

ಚೌಚೌಕಟ್ಟು—ಮನೆಗೆ ಬರುವಾಗ ಮಕ್ಕಳಿಗೆ ಕೊಟ್ಟು ತೃಪ್ತಿಪಡಿಸಲು ಮಧ್ಯಮವರ್ಗದ ಗಂಡಸು ತರುವ ಒಂದು ಪೊಟ್ಟಣ.

ಚೌರೀದುಃಖ—ಗಂಡಸಿಗೇಕೆ ಚೌರೀದುಃಖ, ಎಂದು ಗಾದೆ ಹೇಳುತ್ತದೆ. ಆದರೂ ಪಾಪ ಅವನೇ ಹೋಗುತ್ತಾನೆ, ಕೆಲವು ವೇಳೆ ಅದನ್ನು ಕೊಂಡು ತರುವುದಕ್ಕೆ.

ಚೌರ್ಯವಿದ್ಯಾ—ಯೋಗಾಚಾರ್ಯರ ಗ್ರಂಥ.

ಚೌಳ—ಅನೇಕರಿಗೆ ಇನ್ನೂ ಆಗಬೇಕಾದ ಸಂಸ್ಕಾರ.

## ಛ

ಛತ್ರಪತಿ—ಕೊಡೆಹಿಡಿದವ; ಪಾರುಪತ್ಯಗಾರ.

ಛತ್ರಿ—ಹೊತ್ತು ಮುಳುಗಲು ಬಾಡಿ ಬಚ್ಚಿಡುವುದೆಲ್ಲ.

ಛದ್ಮವ್ಯೂಹ—ಗುಪ್ತ ಯುದ್ಧ ಪದ್ಧತಿ.

ಛಲೋಪವಾಸಕ—ಉಪವಾಸವ್ರತ ತೊಟ್ಟಿರುವವ.

ಛಂದ—ಛಂದವೇ ಚಂದ, ಸ್ವಚ್ಛಂದ, ತುಚ್ಛಂದ.

ಛಾನಸಗಾರ— ಛಾನ್ಸಿಗಾಗಿ ಕಾದು ಅದನ್ನೇ ಅವಲೋಕಿಸುತ್ತಿರುವವ.

ಛಿದ್ರಾನ್ವೇಷಣ—ಫೂಟ್‌ಲಾಯರೀ ತಂತ್ರ.

ಛೂ—ನಾಯಿಜನ್ಮ ನನ್ನದು ಎಂದು ಹೇಳಿಕೊಳ್ಳುವವರಿಗೆಲ್ಲ ಇದರ ಅರ್ಥ ಚೆನ್ನಾಗಿ ತಿಳಿಯುತ್ತದೆ.

ಛೂಬಾಣ—'ನಾಯಿಗಳಿವೆ ಎಚ್ಚರಿಕೆ' ಎಂಬುದರ ಪ್ರಕಟಣೆ.

ಛೇವಣಾತಿ—ಕಳೆದುಕೊಂಡ ಠೇವಣಾತಿ.

## ಜ

ಜಕ್ಕಣಾಚಾರಿ—ಇನ್ನೂರು ಮುನ್ನೂರು ವರ್ಷಗಳ ವರೆಗೆ ಬಾಳಿ, ಕರ್ನಾಟಕದ ನಾನಾಸ್ಥಳಗಳಲ್ಲಿ ದೇವಸ್ಥಾನಗಳನ್ನು ಕಟ್ಟಿದ ಮಹಾಶಿಲ್ಪಿ.

ಜಗಲಿ—ಜಗಳಗಳ ಉಗಮಸ್ಥಾನ.

ಜಗಳ—ಗಂಡ-ಹೆಂಡಿರ ಜಗಳ, ಗಂಡ ಕೊಂಡುಕೊಡುವ ತನಕ.

ಜಗಳಗಂಟಿಗ—ಇಬ್ಬರ ಜಗಳದಲ್ಲಿ ಗಂಟು ಹೊಡೆಯುವ ಮೂರನೆಯವ.

ಜರ್ಜರಕಾವ್ಯಕಂಥೆ—ಆಧುನಿಕ ಕವಿತೆಗಳು.
ಜಟಕ—ಬಡ ಕುದುರೆಗಳು ಎಳೆದು ಸಾಗಿಸುವ ಅಗ್ಗದ ಗೋರಿ.
ಜಟಾಮಾಂಸಿ—ಜಟೆ ಇದ್ದರೂ ಅಥವಾ ಅದರಿಂದಲೇ ಕೊಬ್ಬಿದ ತಾಪಸಿ.
ಜಟ್ಟಿ—ಈತ ಎಂದಿಗೂ ಜಾರ.
ಜಂಬ—ಕತ್ತೆಯನ್ನು ನೋಡುವಾಗ ಹೇಸರುಕತ್ತೆಗಾಗುವ ಮನೋವಿಕಾರ; ಈ ವರ್ಷದ ಮಾಡಲ್ ಎನಿಸಿದ ಕಾರು ಹೋದವರ್ಷದ ಮಾಡಲ್ ಕಾರನ್ನು ನೋಡಿದಾಗ ಅದಕ್ಕಾಗುವ ವಿಕಾರ; ಜಂಬವನ್ನು ಕೊಚ್ಚ ಬೇಕಾದವರು ಕೊಚ್ಚ ಬೇಕಾಗಿಯೇ ಇಲ್ಲ.
ಜಂಬಕರ್ಣ—ವಜ್ರದ ಬೆಂಡೋಲೆ ಧರಿಸಿದ ಕಿವಿ.
ಜಂಬಿಗ—ಜಂಬಿಗರು ತಮಗಿಂತ ಕೆಳದರ್ಜೆಯವರೊಂದಿಗೆ ಸೇರುವ ಸಂಭವವೇ ಇಲ್ಲ; ಏಕೆಂದರೆ ಅವರಿಗಿಂತ ಕೆಳದರ್ಜೆಯವರೇ ಇಲ್ಲವಲ್ಲಾ.
ಜನ—ಜನಾನ ದನಮಾಡೋಕೆ ಜನಾರ್ದನ ಬೇಕಿಲ್ಲ (ಗಾದೆ).
ಜನಜಂಗುಲಿ—ಜಂಗಲಿಯವರಂತಾಡುವ ಜನದ ಗುಂಪು.
ಜನನ—ಬಡವರಿಗೆ ಸಂಭವಿಸಿದ ಮೊದಲನೆಯ ಅನಾಹುತ; ಏಕಾಂತವಾಸದಿಂದ ಬಿಡಗಡೆ.
ಜನಪ್ರಿಯ ಗೀತೆ—ಇದನ್ನು ಕೆಲವರು ಹಾಡುವ ಮೊದಲು ಜನಪ್ರಿಯ ಎನಿಸಿರುತ್ತದೆ.
ಜನಪ್ರಿಯ ಚಿತ್ರ—ಜಾಹೀರಾತುಗಳಲ್ಲಿ ಹೀಗೆಂದು ಹೇಳಿದರೂ ಇಂಥ ಚಿತ್ರ ಯಾವ ಜನಕ್ಕೆ ಪ್ರಿಯ ಎಂದು ನಾವು ವಿಮರ್ಶಿಸಬೇಕು ?
ಜನಮೇಜಯ—ಪ್ರಜಾಪ್ರಭುತ್ವದ ಕೂಗು; ಜನವೇ ಜಯಿಸುವರು, ಅವರ ಕೈಯಲ್ಲಿದೆ ಜಯ, ಅಪಜಯ, ಎರಡೂ ಎಂಬ ತತ್ವ; ಪ್ರಾಚೀನ ಭಾರತದಲ್ಲಿ ತೂಕಡಿಸದೆ ಕಥೆ ಕೇಳಿದ ಒಬ್ಬ ಧೀರ.
ಜನಲೋಕ—ಮಹರ್ಲೋಕಕ್ಕೂ ಮೇಲೆ ಜನಲೋಕವಿದೆಯಂತೆ.
ಜನಸಂಖ್ಯೆ—ಬಡವರೂ ಮಾಡಬಹುದಾದ ದೇಶಸೇವೆ; ನರಸಂಖ್ಯೆಯನ್ನ ಹತ್ತು ಹೆಚ್ಚಿಸುವುದಕ್ಕಿಂತ ಮರಸಂಖ್ಯೆಯನ್ನು ಒಂದು ಹೆಚ್ಚಿಸುವುದು ಶ್ರೇಷ್ಠ ಎಂದು ಅಗ್ನಿಪುರಾಣದಲ್ಲಿ ಹೇಳಿದೆಯಂತೆ.
ಜನ್ಮಭಾಷಾ—ಮೌನ.

ಜಯ—ಸಮರಜಯುಂ ದೈವಾಯತ್ತಂ.

ಜರತ್ಕಾರು—ಹಳೇಕಾರು; ಹೇಳಿದ ಮಾತು ಕೇಳುವ ಹೆಂಡತಿಯಾಗಬೇಕೆಂದು ಹಟತೊಟ್ಟು ಒಂದು ಸರ್ಪವನ್ನು ಮದುವೆಯಾದ ದಡ್ಡ.

ಜರಾನರೆ—ಕೊಂಚ ನರೆ.

ಜರಾಸಂದ— ಜರೆ ಬಂದ.

ಜರಿ—ಇಂಗ್ಲೀಷಿನಲ್ಲಿ ಇದಕ್ಕೆ ಗಿಲ್ಟ್ ಎಂದು ಹೇಳುತ್ತಾರೆ; ನಾವಾದರೋ ಅಷ್ಟು ತೀಕ್ಷ್ಣವಾಗಿ ಟೀಕಿಸದೆ, ಗಿಲೀಟ್ ಎಂದು ಬಿಡುತ್ತೇವೆ; "ಜರಿಯದೆ ಮಾಣದೀ ಧರೆ", ಆದ್ದರಿಂದಲೇ ಜರಿಗೆ ಬೆಲೆ.

ಜಲಪಾತ—ಎಳ್ಳಿಲ್ಲದ ತರ್ಪಣ.

ಜಲಾಕ್ಷರ—ಒಂದು ನೌಕೆಯೊಳಗೆ ಕುಳಿತು ಪ್ರಪಂಚವನ್ನು ಆವರಿಸಿರುವ ನಾಲ್ಕು ಬಗೆಯ ಭಯಗಳನ್ನೂ ನಿವಾರಿಸುತ್ತೇವೆಂದು ಚರ್ಚಿಲ್-ರೂಸ್‌ವೆಲ್ಟರು ಮಾಡಿದ ನಿರ್ಧಾರ ಹಾಗೂ ಘೋಷಣೆ; ಇಂಥ ಇತರ ನೌಕಾಘೋಷಣೆಗಳು.

ಜ್ವರ—ಎತ್ತಿಗೆ ಜ್ವರ ಬಂದರೆ, ಕೋಣನ್ನೆಳೆದು ಕಟ್ಟಿದರು. (ಗಾದೆ).

ಜಾಗರೂಕತೆ—ರೈಲಿನಲ್ಲಿ ನಮ್ಮ ಜಾಗವನ್ನು ಉಳಿಸಲು ನಾವು ತೆಗೆದು-ಕೊಳ್ಳುವ ಎಚ್ಚರಿಕೆ ಕ್ರಮ.

ಜಾಗರೂಕ್ಷತೆ—ಅದೇ ಜಾಗರೂಕತೆಯಲ್ಲಿ ನಾವು ರೂಕ್ಷವಾಗಿ ವರ್ತಿಸುವ ಸಂಭವ ಹೆಚ್ಚು.

ಜಾರ್ಜೆಟ್—ತಮಗೆ ಸಾಲದೊರೆಯುತ್ತದೆ ಎಂಬ ಹೆಮ್ಮೆಯ ವಿಷಯವನ್ನು ಆಕೆಯ ಮೂಲಕ ಪ್ರಚಾರ ಮಾಡಲು ಆತ ಹೂಡುವ ಉಪಾಯ.

ಜಾಣ—ಭಂಡರ ರಾಜ್ಯದಲ್ಲಿ ಉಂಡವನೇ ಜಾಣ.

ಜಾಣಕ್ಯ—ಚಾಣಕ್ಯನಂತೆ ವರ್ತಿಸುವ ಜಾಣ.

ಜಾಣತನ— ನೌಕರಿ ಹುಡುಕುತ್ತಿರುತ್ತಾನೆ, ನೌಕರಿ ಸಿಕ್ಕದೆ ತಪ್ಪಿಸಿಕೊಳ್ಳುತ್ತಾನೆ, ಅಳಿಯ— ಇದೇ ಅವನ ಜಾಣತನ.

ಜಾಣೂರ—ಜಟ್ಟಿ, ಜಾಣನೂ ಆದರೆ ಅವನಿಗೆ ಈ ಹೆಸರು ಸಲ್ಲುವುದು; ಇಲ್ಲ-ದಿದ್ದರೆ ಅವನು ಎಷ್ಟು ದೊಡ್ಡವನಾದರೂ ಅವನನ್ನು ಜಾಣೂರ ಎಂದೇ ಹೇಳುತ್ತಾರೆ ಜನ.

ಜಾತಕಪಕ್ಷಿ— ನಮ್ಮ ಭವಿಷ್ಯದ ಓಲೆಗರಿಯನ್ನೋ ಕಾಗದದ ತುಂಡನ್ನೋ ಎತ್ತಿ ಬೇರೆ ಇರಿಸುವ ಪಕ್ಷಿ....ಇದಕ್ಕಾಗಿ ನಾವು ಆ ಪಕ್ಷಿಯನ್ನು ಪಂಜರದಲ್ಲಿರಿಸಿದವನಿಗೆ ಅರ್ಥಾಣೆ ಕೊಡಬೇಕಾಗುತ್ತದೆ.

ಜಾತಿ— ಜಾತಿ ಜಾತಿ ಎನಬೇಡ ಎಂದು ಸರ್ವಜ್ಞ ಹೇಳುತ್ತಾನೆ; ಏಕೆಂದರೆ ದೇವನೊಲಿದಾತನೆ ಜಾತನಂತೆ.

ಜಾಹಿರಾತು—ಟಾನಿಕ್ಕುಗಳನ್ನು ಕೊಡುವ ಮೊದಲು ಶೀಷೆಗಳ ಮೇಲೆ ಅಂಟಿಸಿರುವ ಜಾಹಿರಾತುಗಳನ್ನು ಪಠಣಮಾಡುವುದು ಅತ್ಯಾವಶ್ಯಕ.

ಜ್ಞಾನಗೃಧ್ರ—ವಯೋಗೃಧ್ರ ಎಂಬಂತೆ; ಆ ಮಾತನ್ನು ನೋಡಿ.

ಜ್ಞಾನಮಂಟಪ—ಕಾರಾಗೃಹ (ಕಿಟಲ್).

ಜಾಬವಂತ—ನೌಕರಿಯನ್ನು ದೊರಕಿಸಿಕೊಂಡ ಜಾಣ.

ಜಾಲಿಗರು—ಜಾಲಿಯಾಗಿ, ಖುಷಿಯಾಗಿ ಇರುವವರು. ಕವಿಗಳು 'ಹಾಸ್ಯೇಂದ್ರ ಜಾಲಿಗರೆ'ಂದು ಒಬ್ಬರು ಹೇಳಿದಾರೆ.

ಜ್ವಾಲಾಮುಖಿ—ಇಂದುಮುಖಿ ನಾಳೆ ಜ್ವಾಲಾಮುಖಿಯಾಗಬಹುದು; ನೆನಪಿರಲಿ.

ಜಾವಜ್ಜೀವ— ಜಾವಮಾತ್ರದ ಜೀವ ಉಳಿದಿರುವವನು, ಯಾವಜ್ಜೀವವೂ ಕೃತಜ್ಞನಾಗಿರುತ್ತೇನೆ ಎಂದು ಹೇಳುವುದು ಸುಲಭ.

ಜಿನ್ನಭಿನ್ನ—ಮೂರು ತುಂಡು, ಎರಡು ಭಾಗ.

ಜಿಪುಣ—ಕಪಿಮುಷ್ಟಿಯನ್ನು ಮೀರಿಸುವ ನರಮುಷ್ಟಿ; ಇವನ ಕೈ ನಾವು ಹಿಡಿದು ಕುಲುಕಿದರೆ ನಾವು ಮರೆಯಲ್ಲಿ ನಿಂತು ಬೆರಳುಗಳನ್ನು ಮತ್ತೆ ಎಣಿಸಿ ನೋಡಿಕೊಳ್ಳಬೇಕಾಗುತ್ತದೆ; ಸಾವಿರಾರು ವಜ್ರಗಳು ತನ್ನಲ್ಲಿದ್ದರೂ ಒಂದನ್ನು ನಮಗೆ ಕೊಡದವ.

ಜಿಹ್ವೆ—ದಂತಪಂಕ್ತಿಗಳ ನಡುವೆ ಓದ್ದಾಡುವ ಸಂಕಟ ಇದಕ್ಕೆ.

ಜೀರ್ಣಶಕ್ತಿ—ಶಾಕಾದಿಗಳನ್ನು, ಶಾಪಾದಿಗಳನ್ನೂ ಅರಗಿಸಲು ಒದಗುವ ಶಕ್ತಿ.

ಜೀರ್ಣೋದ್ಧಾರ— ರಿಟೈರಾದಮೇಲೆ ಮತ್ತೆ ನೌಕರಿ ಕೊಟ್ಟಾಗ.

ಜೀಪಿಸು— ಜೀಪಿನಲ್ಲಿ ಓಡಾಡುವುದು.

ಜೀಪೂತವಾಹನ—ಜೀಪನ್ನೇ ವಾಹನವಾಗಿ ಉಳ್ಳವನು.

ಜೀವಕ—ಜೀವಕನೂ ಸಾಯುವನು; ಧನಪಾಲಿಗೂ ಹಣದ ಕೊರತೆ; ಪಂಥಕನಿಗೆ ದಾರಿ ತಿಳಿಯದು; ಆದ್ದರಿಂದ ಹೆಸರಲ್ಲೇನೂ ಇಲ್ಲ.

ಜೀವನಚರಿತ್ರೆ—ಇದನ್ನು ನಮಗೋಸ್ಕರ ತಿದ್ದಿ ಕೊಡಲು ಎಲ್ಲರೂ ಬಲ್ಲರು.

ಜೀವವಿಮೆ—ಸತ್ತಮೇಲೆ ಸಿಗುವ ಸಿರಿಯನ್ನು ತೋರಿಸಿ ಬದುಕಿರುವಾಗ ಬಡತನಕ್ಕಿಳಿಸುವ ಒಂದು ಏರ್ಪಾಟು; ಸ್ವರ್ಗದಲ್ಲಿ ವಿಮಾ ಏಜಂಟರು ಇಲ್ಲ; ನರಕದಲ್ಲಿ ಅವರು ಇರಬೇಕಾಗಿಯೂ ಇಲ್ಲ; ಭೂಲೋಕದಲ್ಲಿದ್ದರೆ ಸಾಕಾಗಿದೆ.

ಜುಟ್ಟಾಳ—ಕ್ರಾಪ್ ಮಾಡಿಸಿಕೊಂಡಿರುವವ.

ಜುಲ್ಮಿಭೂಮಿ—ಬಲವಂತದಿಂದ ವಿಧಿ ಇಲ್ಲದೆ ಹಲವರು ವಾಸಿಸಬೇಕಾಗಿ ಬಂದಿರುವ ನಾಡು.

ಜೂ—ಸಿಕ್ಕಿಬಿದ್ದ ಪ್ರಾಣಿಗಳನ್ನು ಸಿಕ್ಕಿ ಬೀಳದ ಪ್ರಾಣಿಗಳು ನೋಡಿ ನಲಿಯುವುದಕ್ಕಾಗಿ ಏರ್ಪಡಿಸಿರುವ ಸ್ಥಳ; ಕಾಡುಮನುಷ್ಯರು ಕಾಡುಮೃಗಗಳನ್ನಿರಿಸಿರುವ ಜಾಗ.

ಜೂಜು—ಶ್ರೀಮಂತತನಕ್ಕೆ ಜಾರಲು ಬುದ್ಧಿವಂತರು ಕಲ್ಪಿಸಿರುವ ದರಿ; "ಮಕ್ಕಳುಣ್ಣುವ ಕಾಲಕ್ಕೆ ಅಪ್ಪ ಜೂಜು ಕಲಿತ" (ಗಾದೆ).

ಜೇಪ್ಪಾ—'ಭವತಿ ಭಿಕ್ಷಾಂ ದೇಹಿ' ಎಂಬ ಸಪ್ತಾಕ್ಷರೀ ಮಂತ್ರದ ಅಧಿದೇವತೆ.

ಜೋಕ್—ಬಹಳ ಹೊತ್ತಿನವರೆಗೂ ಅರ್ಥವಾಗದ ಜೋಕ್.

ಜೊಂಡು—ಆನೆಯಷ್ಟು ಗಾತ್ರ ಗೋತ್ರಗಳಿದ್ದರೂ ಹಲವರು ಜೊಂಡನ್ನೆ ತಿನ್ನುತ್ತಾರೆ.

ಜೋಕುಗಾರ—ಹಾಸ್ಯ ಸಾಹಿತಿ.

ಜೋಕೆ—ಜೋಕೆ ತಪ್ಪಿದ ಬಳಿಕ ಅರ್ಥಂ ವ್ಯರ್ಥಂ; ಹಾಸ್ಯವನ್ನು ತಿಳಿಯಲಾರದವನಿಗೆ ಅರ್ಥ ವಿವರಿಸಿ ಏನು ಪ್ರಯೋಜನ ?

ಜೋಗುಳ—ನಾವು ಕೇಳುವ ಮೊದಲ ಹಾಡು; ಆದ್ದರಿಂದಲೇ ನಮಗೆ ಸಂಗೀತದ ಮೇಲೆ ಅಷ್ಟು ಕೋಪ.

ಜೋಡಶೋಪಚಾರ—ಹದಿನೇಳನೆಯ ಉಪಚಾರ, ನ್ಯಾಯಬಾಹಿರವಾದದ್ದು, ಅಧರ್ಮವೆನಿಸಿದೆ.

ಜೋಬಾಲಬುಟ್ಟಿ—ಗೋಪಾಲಬುಟ್ಟಿಗೆ ಬದಲು ಜೋಬು ತೋರಿಸುತ್ತ ನಡೆವವ.

ಜೋಳಿಗೆ– ಅಕ್ಕರವು ಲೆಕ್ಕಕ್ಕೆ, ತರ್ಕ ತಾ ವಾದಕ್ಕೆ, ಮಿಕ್ಕ ಓದುಗಳು ತಿರುಪೆಗೆ (ಸರ್ವಜ್ಞ) ಆದರೂ, ಕಾನ್‌ವೋಕೇಷನ್‌ನಲ್ಲಿ ಪ್ರತಿ ಒಬ್ಬ ಪದವೀಧರನಿಗೂ ಹುಡ್ಡನ್ನು ವಿಧಿಸಿರುವರು.

ಜಂಬದ ಕೋಳಿ—ಯ 'ಎಕ್ಕೆಕ್ಕೆಮನೆಗಳ್ದು ಕೊಕ್ಕುಕ್ಕು' ಎಂದು ಕೋಳಿ ಕೂಗಿದುವಾಗಳ್: ತಾನು ಕೊಗದೆ ಸೂರ್ಯ ಉದಿಸುವುದಿಲ್ಲ ಎಂದು ತಿಳಿದಿರುವ ಕೋಳಿ.

## ಟ

ಟಕವು—ಧಾರವಾಡದ ಪ್ರುಕಟ.

ಟಂಕಸಾಲೆ—ಸರ್ಕಾರದ ಆತಂಕಗಳನ್ನೆಲ್ಲ ಪರಿಹರಿಸುವ ಸಂಸ್ಥೆ.

ಟಗರು—ಚುನಾವಣೆಯಲ್ಲಿ ಭಾಗವಹಿಸುವ ಹುರಿಯಾಳು; ಟಗರನಾಟಕ ಸೂತ್ರಧಾರಿ ಎಂಬುದನ್ನು ನೋಡಿ.

ಟಪಾಲು— ನಂಟರಿಷ್ಟರಿಗೆ ಪತ್ರ ಬರೆದು ಮುಗಿಸಿದ ಮೇಲೆ ಅದನ್ನು ನಾವು ಡಬ್ಬದೊಳಕ್ಕೆ ತಳ್ಳಿ, ಕೈತೊಳೆದುಕೊಂಡು ಬಿಡಬಹುದು, ಈ ಏರ್ಪಾಡಿನಿಂದ.

ಟಮ್ಮಟೆ—ಮರ್ತ್ಯಲೋಕವೆಂಬುದು ವಕ್ತಾರನ ಟಮ್ಮಟೆಯಯ್ಯ; ಇದನ್ನು ಬಡಿಯುದಿದ್ದರೆ ನಮ್ಮ ಇರವನ್ನೇ ಒಬ್ಬರೂ ಗಮನಿಸುವುದಿಲ್ಲ.

ಟವಣೆ—ಕತ್ತೆ ಚಿತ್ರಗಾರನ ಮಿಂಡ, ಹಣ ನೋಟಗಾರನ ಮಿಂಡ, ಟವಣೆ ಶ್ಯಾನುಭೋಗನ ಮಿಂಡ.

ಟಿ. ಎನ್. ಟಿ—ಬಾಯಲ್ಲಿ ಲಾಯಲ್‌ಟಿ; ಬಗಲಿಲ್ಲ ಟಿ. ಎನ್. ಟಿ. (ಪು-ಸರಸ್ವತಿ).

ಟಿಪ್ಪಣಿ—ಟಿಪ್ ಮಾಡಬೇಕಾದ್ದೇ ಪಾಶ್ಚಾತ್ಯದೇಶಗಳಲ್ಲಿ ಧರ್ಮ.

ಟಿಂಪನ—ಎಲ್ಲ ಮಧುರಸ್ವರಗಳೂ ಟಿಂಪನ ಕಂಪನು ಊಡುತಿವೆ.

ಟೀಕೆ—ಇತರರ ದೋಷಗಳಲ್ಲಿ ನಮಗೆ ಅನುಕೂಲವಾದವುಗಳನ್ನೆಲ್ಲ ಆರಿಸಿ ಹೊಗಳುವ ಪದ್ಧತಿ.

ಟೀಚರ್—ನಪುಂಸಕಲಿಂಗ....ಅಂದರೆ ಮಾಷ್ಟರೂ ಆಗಬಹುದು, ಮೇಡಮ್ಮೂ ಆಗಬಹುದು.

ಟ್ರೂಮನ್ —ಹೆಸರಲ್ಲೇನಿದೆ ಮಹಾ, ಎಂಬುದಕ್ಕೆ ಒಳ್ಳೆಯ ಉದಾಹರಣೆ.
ಟೆಕ್ಸ್ಟ್—ವಿದ್ಯಾರ್ಥಿ ಕರಭೂಷಣ.
ಟೆಲಿಫೋನ್—ಯಾರು ಯಾರೋ ಪರಸ್ಪರ ಮಾತನಾಡುವುದನ್ನೆಲ್ಲ ಗುಪ್ತ-ವಾಗಿ ಕೇಳಲು ಇದೊಂದು ಉಪಾಯ.
ಟೆಲಿವಿಷನ್—ಸಂಗೀತಗಾರರ ಮುಖವಿಕಾರಗಳನ್ನು ಬಹಿರಂಗಪಡಿಸುವ ಆಧುನಿಕ ಉಪಕರಣ.
ಟೋಪಿ—ಇದನ್ನು ನಮಗೆ ಮೊದಲು ಹಾಕಿದವರು ಪರಂಗಿಯವರು.
ಟೋಲ್‌ಗೇಟು—ಇಲ್ಲಿಗೆ ಬಂದಾಗ ಲಾರಿಗಳಿಗೆ ಸ್ಪೀಡ್‌ಲಿಮಿಟ್ ಎಂಬುದೆ ಇಲ್ಲ.

ಠ

ಠಕ್ಕಂ—ಪರಸ್ಪರ ಸಂಬಂಧಸೂಚಕ; ಆತಂಗೆ ಈತಂಗೆ ಠಕ್ಕಂ.
ಠೀಕಾಚಾರ್ಯ— ಹೇಳಿದ್ದಕ್ಕೆಲ್ಲ ಠೀಕ್ ಎಂದು ಹೇಳುವ ಆಚಾರ್ಯ.
ಠೀವಿ—ಕ್ಷೌರಕ, ಅಗಸ ಇವರಿಬ್ಬರಿಂದ ನಮಗೆ ದೊರೆಯುವ ದೊಡ್ಡಸ್ತಿಕೆ.
ಠೇಕಾರ—ಠೇವಣಾತಿ ಕಳೆದುಕೊಂಡರೂ ಠೇಕಾರ ಬಿಡಬಾರದು.

ಡ

ಡಕಾಯಿತ—ಹಿಟ್ಲರ್ ಮುಂತಾದವರ ಮರಿ.
ಡಬಡ್ಡಾಳಿಕೆ—ಪೊಳ್ಳು ಭರವಸೆಗಳಿಂದ ಮರುಳು ಮಾಡುವಿಕೆ.
ಡಂಗುಬೂದಿ—ಡಂಗುಬಡಿಯಲು ಹಲವು ಗುರುಗಳೂ ಶಿಷ್ಯರೂ ಬಳಿದುಕೊ-ಳ್ಳುವ ಪದಾರ್ಥ.
ಡಾರ್ವಿನ್—ಮಾನವನಿಗೂ ವಾನರನಿಗೂ ರಕ್ತಸಂಬಂಧವಿದೆ, ಎಂಬ ತತ್ತ್ವ ಈತನಿಗೆ ಇತರ ಮನುಷ್ಯರನ್ನು ನೋಡಿದಾಗ ಹೊಳೆಯಿತೋ ಅಥವಾ, ಕನ್ನಡಿ ನೋಡಿದಾಗ ಹೊಳೆಯಿತೋ, ಹೇಳುವುದು ಕಷ್ಟ.
ಡ್ರಾಂದಾಸ್—ಕುಡುಕ.
ಡ್ರಾಮಾವತಾರ—ನಾಟಕದ ವೇಷ.
ಡ್ರಾಮೋದರ—ಒಂದು ಡ್ರಾಂ ಕುಡಿದವ.
ಡುಂಡುದುಬಕ—ರೇಷನ್ ಕಾಲದ ಅಕ್ಕಿ ತಿಂದು ಬದುಕುವವ.

ಡೊಂಬ—ಕಂಡವರ ಪದಾರ್ಥವನ್ನು ದಾನಪಡೆಯುವವ.

ಢ

ಢಮಾರುಗ—ಬಾಂಬು.

ಢಿಕ್ಕಾಪಾಲು—ಕಾರುಗಳೆರಡು ಎದುರು-ಬದರಾಗಿ ಒಂದೇ ಗೆರೆಯ ಮೇಲೆ ಬಂದಾಗ.

ಢಿಕ್ಕಿ—ಒಬ್ಬನೇ ಪಾದಚಾರಿಯನ್ನು ಎರಡು ಲಾರಿಗಳು ಒಟ್ಟಿಗೆ ಮಾಡುವಾಗ.

ತ

ತಕ್ಕ—ತಕ್ಕರಂ ತೇಲಿಸಿ ಮಿಕ್ಕರಂ ಲಾಲಿಸಿದರೆ, ಎಕ್ಕ ಹುಟ್ಟುವುದೆಂದ ಸರ್ವಜ್ಞ.

ತಕ್ಕಡಿ—ವ್ಯಾಪಾರಗಾರರು ಗಿರಾಕಿಗಳಿಗೆ ಮೋಸಮಾಡಲು ಉಪಯೋಗಿಸುವ ಒಂದು ಸಾಧನ; ಅನೇಕ ಸಂಸಾರಗಳಲ್ಲಿ, ತಕ್ಕಡಿ ಏಳುವುದೇ ಇಲ್ಲವಂತೆ; ತಕ್ಕಡಿಗೇನು ಗೊತ್ತು, ಸಕ್ಕರೆ ಬೆಲೆ ?

ತಗಡಿಗ – ತಗಡನ್ನು ಬಡಿದಂತೆ ಟೊಳ್ಳು ಭಾಷಣ ಮಾಡುವವ.

ತಗಣೆ—ಹಾಸಿಗೆ ಇದ್ದಷ್ಟು ತಗಣೆ ಕಾಟ (ಗಾದೆ) ಮನುಷ್ಯನೊಂದಿಗೆ ತನ್ನ ರಕ್ತಸಂಬಂಧವನ್ನು ಉಳಿಸಿಕೊಂಡಿರುವ ಪ್ರಾಣಿ.

ತಟಸ್ಥ—ನದೀಸ್ನಾನಕ್ಕೆ ಬಂದು ನೀರಿಗೆ ಇಳಿಯಲೋ ಬೇಡವೋ ಎಂದು ಅನುಮಾನಿಸುವವ.

ತಂಡುಲದೇವ—ರೇಷನ್ ಆಫೀಸರ್.

ತತ್ವಮಸಿ—ಇದನ್ನು ತುತ್ತು ಸವಿ ಎಂದು ಹಲವರು ಉಚ್ಚಾರಣೆಮಾಡುವುದುಂಟೆಂದು ಸರ್ವಜ್ಞನೇ ಹೇಳಿದ ಮೇಲೆ ಅದು ನಿಜವಿರಬೇಕೆನಿಸುತ್ತದೆ.

ತಂತ್ರ—ನೂಲುವುದೂ ತಂತ್ರಕ್ಕಾಗಿಯೇ.

ತಂತಿ—ಮಾವನಿಂದ ಹಣ ವಸೂಲಿ ಮಾಡಲು ಅಳಿಯಂದಿರು ಉಪಯೋಗಿಸುವ ಒಂದು ಉಪಕರಣ.

ತಂತ್ರೀಪಾಲ—ತಂಬೂರಿ ಮೀಟುವವ; ಸಹದೇವ.

ತಂತ್ರಂ—ರೇಗಿ ಕೂಗಾಡುವುದು (ಆಂಗ್ಲ).
ತದ್ಭವ—ಪಂಡಿತ ಪುತ್ರ.
ತಂದೆ—ಮನೆಮನೆಯಲ್ಲೂ ಅವತಾರ ಮಾಡಿರುವ ಶಿಶುಪಾಲ; ಯಾವುದನ್ನು ತಾಯಿ ತರಹೇಳಿದರೂ, 'ತಂದೆ,' ಎನ್ನುವ ಪ್ರಾಣಿ; ಮಕ್ಕಳ ಹಿಂಡು ಹಿಂಡುವ ಕಾಮಧೇನು.
ತಪಸ್ಸು—ಮೂಗಿನ ತುದಿಯನ್ನೇ ನೋಡುತ್ತ ಕುಳಿತಿರುವುದು; ಚಪ್ಪಟೆ ಮೂಗಿನವರಿಗೆ ಇದು ಬಲು ಕಷ್ಟ.
ತಪ್ಪು—ಇಬ್ಬರ ಜಗಳದಲ್ಲಿ ಮೂರನೆಯವನದೇ ತಪ್ಪು, ಸಾಮಾನ್ಯವಾಗಿ.
ತಂಪಿಗೆ—ಸಂಪಿಗೆಗಿಂತಲೂ ತಂಪಿಗೆ ಎಂದರೆ, ತಂಪಾಗಿರುವುದು ಕಿವಿಗಳಿಗೆ (ಆಧುನಿಕ ಕವಿ).
ತಬ್ಬಲಿ—ಉಪಾಧ್ಯಾಯವೃತ್ತಿಯನ್ನವಲಂಬಿಸಿದ ನತದೃಷ್ಟ.
ತಬ್ಬುಲಿ—ಮೃಗಾಲಯದಲ್ಲಿ ಮಾನವನ ಮನೋರಂಜನೆಗಾಗಿ ಪಂಜರದೊಳಕ್ಕೆ ಸೇರಿಸಲಾದ ಹುಲಿ.
ತಂಬಿಗೆ—ಗಂಗೆಗೆ ಹೋದರೂ, ನಾವು ತಂಬಿಗೆಯಲ್ಲೇ ಗಂಗಾಜಲ ತರುವುದು.
ತರ್ಮಾಮೀಟರ್—ಹೆಚ್ಚು ಮಾತನಾಡಿ ಪೀಡಿಸುವ ರೋಗಿಯ ಬಾಯಿಗೆ ಡಾಕ್ಟರುಗಳು ಇದನ್ನು ಇರಿಸಿ, ಮಾತನ್ನು ನಿಲ್ಲಿಸುತ್ತಾರೆ.
ತರಳೆ—ತರಲೆಗೂ ತರಳೆಗೂ ನಿಕಟ ಸಂಬಂಧವೆಂದು ಭಾಷಾಶಾಸ್ತ್ರಜ್ಞರೂ ಧರ್ಮಶಾಸ್ತ್ರಜ್ಞರೂ ವಾದಿಸುತ್ತಾರೆ.
ತರಹರಿಕೆ—ಬರಹಬಲ್ಲವನಾದರೂ ತರಹರಿಕೆ ಇರಬೇಕಂತೆ.
ತರಾತುರಿ—ಒಂದು ಬಗೆಯ ಕರ್ಮವ್ಯಾಧಿ.
ತಲೆ—ತಲೆ ಬಲಿಯಿತು ಅಂತ ಕಲ್ಲು ಹಾಯಬಾರದು(ಗಾದೆ). ಇದು ತಾಗಿದಲ್ಲದೆ, ಇದರೊಳಗೆ ಬುದ್ಧಿ ಮೂಡದು; ಲಾಗಾಯ್ತಿನಿಂದಲೂ ಜಾಣರಿಗೆ ದಡ್ಡರ ತಲೆಯೇ ಸೋಪಾನ; ನಾಯಿಂದನೆದುರು ತಗ್ಗಿಸಲೇ ಬೇಕಾದ ಅಂಗ; ಉತ್ತರೆ ಉತ್ತಮಾಂಗ.
ತಲೆಕಾಂಡ—ಬಾಲಕಾಂಡವನ್ನು ನೋಡಿ.
ತಲೆನೋವು—ನಮಗೆ ತಲೆ ಇದೆ, ಎಂದು ಕಂಡುಕೊಳ್ಳಲು ಇದೊಂದೇ ದಾರಿ.

ತಳಪಾಕ—ತಳಸೀದು ಹೋದಾಗ.

ತಳಮಲ—ಚಟ್ಟು.

ತಕ್ಷಣಾಯನ—ಕೂಡಲೇ ಮಾಡಬೇಕಾದ ಅವಸರದ ಹೊತ್ತು.

ತಕ್ಷಣೋತ್ತರ—ಕೂಡಲೇ ಉತ್ತರಕೊಡಬೇಕಾದ ಅರ್ಜಂಟ್ ಪ್ರಮೇಯ; 'ವೈವ' ಎಂಬ ವಾಚಾ ಪರೀಕ್ಷೆ.

ತಾಜಾತಂತ್ರ—ನಮ್ಮ ದೇಶದ ಪರವಾಗಿ ಹೊರನಾಡುಗಳಲ್ಲಿ ನೆಲೆಸಿರುವ ದೂತರು ಆಚರಿಸಬೇಕಾದ ನೀತಿ.

ತಾಟಕಿ—ದುಷ್ಟ ಹೆಂಗಸರನ್ನು ಕೊಲ್ಲಬಹುದು ಎಂದು ಶ್ರೀರಾಮನು ಈಕೆಯ ವಧೆಯ ಮೂಲಕ ಸಾರಿದನು.

ತಾಂಟಿಯಾಟೋಪಿ—ಟೋಪಿಯವರಿಗೆ ಟೋಪಿಹಾಕಿದ ಶೂರ.

ತಾತ್ಸಾರ—ನಮಗಿಂತ ಶಕ್ತಿವಂತರೂ ಪ್ರತಿಷ್ಠಾವಂತರೂ ನಮ್ಮನ್ನೆದುರಿಸು-ವಾಗ........

ತಾನು—ಅಧಿಕಾರದ ಪಿಪಾಸೆಯಿಂದ ಪೀಡಿತನಾದವನಿಗೆ ಈ ಎರಡಕ್ಷರಗಳೇ ಇಹಪರ ಸಾಧನೆಗೆ ಬೀಜಮಂತ್ರ.

ತಾಪಾಳು—ಗೋಪಾಳದಾಸರ ಆಸನ: "ತಾಪಾಳುಮರದ ಮೇಲೆ ಗೋಪಾಳ ದಾಸಯ್ಯ ಕೂತಿದಾನೆ" (ಗಾದೆ).

ತಾಂಬೂಲ—ಉಗುಳುವ ಉತ್ಸಾಹದಿಂದ ಇದನ್ನು ಅನೇಕರು ಮೆಲ್ಲುತ್ತಾರೆ; ಇದನ್ನು ಬಾಯಿಗೆ ಹಾಕಿದರೆ, ಅಲ್ಲಿಂದ ಹೊರಡುಬಿಡುವುದೇ ಮೇಲು.

ತಾಮಸದೇಶ—"ಕೃಷ್ಣಾಯ ದಕ್ಷಿಣೋ ಭಾಗಃ ತಾಮಸಃ ಪರಿಕೀರ್ತಿತಃ"

ತಾಯಿ—ಒಂದಾನೊಂದು ಕಾಲದಲ್ಲಿ ಈಕೆಯೇ ನಮ್ಮ ತಂದೆಯ ಪ್ರೇಯಸಿ.

ತಾಯಿನುಡಿ—ಸುಗ್ರೀವಾಜ್ಞೆ.

ತಾರಾಪೀಡ—ಸಿನಿಮಾ ಸ್ಟೂಡಿಯೋಗಳಲ್ಲಿನ ದಿಗ್ದರ್ಶಕರು.

ತಾರುಣ್ಯ—ಹತ್ತಿರದ ಬೆಟ್ಟವೂ ನುಣ್ಣಗೆ ಕಾಣುವ ವಯಸ್ಸು; ಈ ವಯಸ್ಸಿನಲ್ಲಿ, ಎಲ್ಲ ಬಿಲ್ಲುಗಳೂ ಕಾಮನ ಬಿಲ್ಲುಗಳಾಗಿಯೇ ತೋರುವುವು; ಬಾಯಿಗೆ ಬೀಕಿ ತಗಲುವ ಕಾಲ; ಪ್ರೇಮಗೀತೆಗಳು ಹೊರಹೊಮ್ಮು-ವುದು ಈಗಲೇ.

ತಾರುಣ್ಯಸಿಂಧು—ಹಲವು ವಿಧದ ಗ್ರಂಥಗಳು.

ತಾವರೆ—ಕವಿಗಳಿಗಾಗಿ ಭಗವಂತನು ಸೃಷ್ಟಿಸಿದ ನೀರುಬಳ್ಳಿ.

ತಾಳ—ನಮ್ಮ ತಾಳಕ್ಕೆ ತಕ್ಕಂತೆ ಕುಣಿಯುವವರು ಒಬ್ಬರೂ ಇಲ್ಲವಲ್ಲಾ, ಎಂಬುದೇ ನಮ್ಮೆಲ್ಲರಿಗೂ ಕೊರತೆ; ಹೊಟ್ಟೆಯಲ್ಲಿ ಲಯವಿರುವಾಗ, ತಾಳವೂ ಅಲ್ಲೇ ಸಿದ್ಧ.

ತಾಳಿ—ತಾಳಿ ಕಟ್ಟಬೇಕೋ, ಬೇಡವೋ, ಎಂಬ ನಮ್ಮ ಪ್ರಶ್ನೆಗೆ, ನಮ್ಮ ಉತ್ತರವೂ ಇದೇ; ತಾಳಿ.

ತಾಳಜಂಘ—ತಾಳಕ್ಕಾಗಿ ಎತ್ತಿ ಎತ್ತಿ ನೆಲಕ್ಕೆ ಬಡಿಯುವ ಮೊಣಕಾಲು.

ತಾಳ್ಮೆ—ಸೇಡು ತೀರಿಸಲು ಉಪಾಯ ತೋರದೆ ಇದ್ದಾಗ, ಅಥವಾ, ಶಕ್ತಿ ಇಲ್ಲದಾಗ.

ತ್ಯಾಗ—ಬಡವರಿಗೆ ಅತಿ ಸುಲಭ.

ತಿಕ್ತಹಸ್ತರು—ಕಹಿತುಂಬಿದ ಮನದಿಂದ ಕೈಸೀಡುವವರು—ಉಂಡೆ ನಶ್ಯ ತೀಡುವವನ ಎಡಗೈ.

ತಿಂಗಳು—ಸಂಬಳ ಸಿಗಬೇಕಾದರೆ, ದುಡಿಯಬೇಕಾದ ಕಾಲಾವಧಿ.

ತಿಥಿ—ಮಕ್ಕಳು ತಂದೆಗೆ ಪಿಂಡಹಾಕುವ ದಿನ.

ತಿದಿಮೂಗು—ಕೆಲವರು ಉಸಿರಾಡುವಾಗ, ಹೀಗೆ ಹೆಸರಿಡೋಣವೆನ್ನಿಸುತ್ತದೆ.

ತಿಮಿಂಗಲ—ತಿಮಿ ಎಂಬ ಮೀನನ್ನು ನುಂಗುವ ಮೀನು; ಸ್ವಂತದವರನ್ನೇ ಮೆಟ್ಟಿ ಮೇಲಕ್ಕೇರಿ ಮೆರೆಯುವ ಮಹಾಮತ್ಸ್ಯ.

ತಿರುಪೆ—ಇಂಡಿಯಾದೇಶದಲ್ಲಿನ ಅತ್ಯಂತ ಜನಪ್ರಿಯ ಕೈಗಾರಿಕೆ.

ತಿಲಮುಷ್ಟಿ—ಹಿಡಿ ಎಳ್ಳನ್ನು ಕದ್ದಾಗ, ಹೊಡೆದು ಶಿಕ್ಷಿಸಿದ ಗುರು, ಮುಂದೆ, ಕೊಲೆ ಕೊಳ್ಳೆಯನ್ನು ತಪ್ಪಿಸುತ್ತಾನೆ.

ತ್ರಿಕೋಣ—ಕಾದಂಬರಿ ಚಲಚ್ಚಿತ್ರ ಇತ್ಯಾದಿಗಳ ನೀಳ್ಗತೆ, ಗೋಳ್ಗತೆಗಳೆಲ್ಲದರ ರೂಪರೇಖೆ.

ತ್ರಿಜಟಾ—ಜಡೆ ಹೆಣೆದುಕೊಳ್ಳುವುದರಲ್ಲಿ ಇತ್ತೀಚಿನ ಫ್ಯಾಶನ್; ಇದನ್ನು ಹಿಂದೆ ಲಂಕೆಯ ರಾಕ್ಷಸಿಯರು ಅನುಸರಿಸುತ್ತಿದ್ದರೆಂದು ವಾಲ್ಮೀಕಿ ಮಹರ್ಷಿಗಳು ಹೇಳಿರುವರು.

ತ್ರಿಶಂಕು—ಮೂರು ಮುಳ್ಳು.

ತ್ರಿಶಂಕೆಸ್ವರ್ಗ—ಇದನ್ನು ಮಾಡೋಣವೆ, ಅದನ್ನು ಮಾಡೋಣವೆ, ಅಥವಾ ಸುಮ್ಮನಿದ್ದು ಬಿಡೋಣವೆ—ಎಂಬ ತ್ರಿವಿಧಸಂದೇಹಗಳೂ ನಮ್ಮನ್ನು ಪೀಡಿಸದ ಸ್ವರ್ಗ.

ತೀರ್ಥಯಾತ್ರೆ—ಪಡಖಾನೆಯ ಕಡೆಗೆ ಪ್ರಯಾಣ.

ತೀರ್ಥರೂಪು—ನಮ್ಮ ಇಷ್ಟದಂತೆ ನಡೆಯುವ ತಂದೆ.

ತುದಿಮೂಗು—ಯೋಗಾಭ್ಯಾಸಕ್ಕೆ ಇದು ಮುಖ್ಯ; ಇದಕ್ಕೆ ಸುಣ್ಣ ಹಚ್ಚಿಕೊಳ್ಳುವವರೂ ಉಂಟು; ಅಂಥವರನ್ನು ನೋಡಿ ಉತ್ತರಕುಮಾರರೂ ಕೂಡ "ತುದಿಮೂಗಿನಲ್ಲಿ ಬಿಳುಪೇನು?" ಎಂದು ಕೇಳಲು ಹೆದರುವುದಿಲ್ಲ.

ತುಂಟದೇವಿ—ಪೂಜಾರಿಯ ಹೆಂಡತಿ; ತುಂಟದೇವಿಗೆ ಗಂಡ ಪೂಜಾರಿ (ಗಾದೆ).

ತುಂಡರಸ—ಸಿಗರೇಟಿನ ಚಟ ಇರುವವರು; ಇತರರು ಸೇದಿ ಎಸೆದ ತುಂಡುಗಳಿಗಾಗಿ ಅರಸುವುದು.

ತುಂಡೀಕೃತ—ತುಂಡೀಕೃತಸ್ಯ ಇಂಡ್ಯಸ್ಯ ಪುನರೇಕಮನಃ ಕುತಃ, ಎಂಬುದನ್ನು ನೋಡಿ.

ತುತ್ತೂರಿ—ಚುನಾವಣೆಗೆ ಮೊದಲು ರಾಜಕೀಯ ಪಕ್ಷಗಳು ಊದುವ ವಾದ್ಯ.

ತುಪ್ಪ—ಸಾಲ ತಂದಾದರೂ ಕುಡಿಯಬೇಕಾದ ಪುಷ್ಟಿದಾಯಕ ವಸ್ತು; ಋಣಂ ಕೃತ್ವಾ ಘೃತಂ ಪಿಬೇತ್.

ತುಪಾಕಿ—ಗಡಿಗಳನ್ನು ಸರಿಪಡಿಸಲು ಎಲ್ಲ ರಾಷ್ಟ್ರಗಳೂ ಉಪಯೋಗಿಸುವ ಒಂದು ಆಯುಧ.

ತುಂಬಿ—ತುಂಬಿದವರ ಕೂಡ ತುಳಕಾಡಬಾರದು; ನಮ್ಮಷ್ಟು ತುಂಬದವರನ್ನು ಹುಡುಕಿಕೊಂಡು ಹೋಗಿ ಅವರ ನಡುವೆ ಕುಳಿತು ತುಳುಕಾಡಬೇಕು.

ತುರೀಯಾನಂದ—ಕಜ್ಜಿ ಕರೆದಾಗ.

ತುರುಕರು—ಜಗಕೆಲ್ಲ ತುರು ಕರುವೇ ದೈವ ಸರ್ವಜ್ಞ.

ತುರುಚುಗಬ್ಬ—ಕೆಣಕಿ ರೇಗಿಸಿದ್ದರಿಂದ ರೋಷದಿಂದ, ಬರೆದ ಕಬ್ಬ.

ತುಸುಸುಯ್ಯುವುದು—ಅಲ್ಪವಾಗಿ, ತೋರಿಕೆಗಾಗಿ ಅನುತಾಪ ಪ್ರಕಟಿಸುವುದು.

ತೂರ್ಯಾಸ್ತಮನ—ಪೋಲಿಂಗ್ ಬೂತುಗಳಿಗೆ ಬಾಗಿಲು ಹಾಕಿದಾಗ.

ತೃಣವಿಧವೆ—ಗಂಡ ಪರವಾಸದೇವ (ಆಂಗ್ಲ).

ತೃಣವಿಧುರ—ಹೆಂಡತಿಯನ್ನು ತವರುಮನೆಗೆ ಕಳುಹಿಸಿರುವ ಪುಣ್ಯಾತ್ಮ-(ಆಂಗ್ಲ).

ತೃಪ್ತಿ—ನಮ್ಮನ್ನು ಸ್ತೋತ್ರಮಾಡಿದಾಗ, ಅನ್ಯರನ್ನು ಅವಹೇಳನ ಮಾಡಿದಾಗ, ಸಿಗದೇ ಇರುವ (ಸಿಗಲಾರದ) ಪದಾರ್ಥಗಳಿಗೆ ಆಸೆ ಪಡದಿರುವುದೇ ಇದಕ್ಕೆ ಮುಖ್ಯ ಸಾಧನ.

ತೃಷ್ಣಾವತಾರ—ದಾಹದ ಉತ್ಪನ್ನ, ಸಂಜೆ ದಿನವೂ.

ತೇಗು—ನಮ್ಮ ಮೇಲಿನ ವಿಶ್ವಾಸದ ಠರಾವು, ಜಠರಲೋಕದಿಂದ.

ತೇಜೀವಂತ—ಕುದುರೆ ಮಾಲೀಕ.

ತೈಲೇಂದ್ರ—ಆಯಿಲ್ ಕಿಂಗ್.

ತೊಂಬತ್ತು—ತೊಂಬತ್ತರಮೇಲೆ ತೊಗರಿಬೇಳೆ (ವೈದ್ಯಗಾದೆ).

ತೊಂದ್ರಜಿತ್—ತೊಂದರೆಗಳನ್ನೆಲ್ಲ ಜಯಿಸಿದವನು.

ತೊಲೆ—ಎಳೆ ಲತೆಯ ಕುಡಿ ಮಾಳಿಗೆಗೆ ತೊಲೆಯೆ ?

ತೋಡಾ—ಇದಕ್ಕೆ ಬೇಡಿ ಎನ್ನುವುದೇ ಸರಿ.

ತೋಳ—ಸಂಬಳವಿಲ್ಲದೆ ಕುರಿ ಕಾಯಲೊಪ್ಪಿರುವ ಸಮಾಜೋದ್ಧಾರಕ; ತೋಳ ಹಳ್ಳಕ್ಕೆ ಬಿದ್ದರೆ, ಬೇಟೆಗಾರರಲ್ಲೇ ಬೈದಾಟ (ಗಾದೆ).

ತೌಡು—ತಾಯಿ ಕೊಟ್ಟರೆ ತೌಡೇ ಪಥ್ಯ; ಆದರೆ ಅದನ್ನೇ ಅತ್ತೆಕೊಟ್ಟರೆ ದೌಡು.

ತ್ರಿಶಂಕು—ಮೂರು ವಿಕೆಟ್ಟುಗಳು.

## ಥ

ಥತ್‌ಪುರುಷ—ಛೀಮಾರಿ ಮಾಡಿಸಿಕೊಂಡ ಗಂಡಸು.

ಥತ್ವ—ಅಸಹ್ಯತನ.

ಥಾನ್—ರೇಷನ್ ಕಾಲದಲ್ಲಿ ಥಾನುಂಟೋ, ಮೂರು ಮೊಳವುಂಟೋ ಎಂಬ ಪ್ರಶ್ನೆ ಏಳುತ್ತದೆ.

ಥೂಥೂ—ಎಲ್ಲರ ಮನೆಯ ದೋಸೆಯು ಈಗ ಥೂ....ಥು.

## ದ

ದಗಡೀಮಗ—ನೆಗಡಿಯಿಂದ ಸೀನುವಾಗ ದಗಡೀಮಗ ಎಂದರೆ ನಿಂತಾನೆ (ಗಾದೆ).

ದರ್ಜಿ–ಪ್ರತಿಸಲವೂ ನಮ್ಮ ಗಾತ್ರವನ್ನು ಅಳತೆ ಮಾಡಿಯೇ ಅಂಗಿ ಹೊಲೆಯುವವ; ಎಂದೋ ಇದ್ದಂತೆ ಈಗಲೂ ಇರಲಾರೆವು ನಾವು, ಎಂಬುದನ್ನರಿತ ಜಾಣ; ಇತರ ಟೀಕೆಗಾರರಿಗಿಂತ ಈತನೇ ಬುದ್ಧಿವಂತ.

ದಡ್ಡ—ಮಕ್ಕಳು ಕಲಿಯುವ ಕಾಲಕ್ಕೆ ತಂದೆ ದಡ್ಡ ಎನಿಸಿಕೊಳ್ಳುತ್ತಾನೆ.

ದಡ್ಡತನ—ಸುಖಸೌಂದರ್ಯಗಳ ಬೇಟೆ.

ದಡ್ಡರಾಮ–ಈತನಿಗೆ ಇಂಗ್ಲೀಷಿನಲ್ಲಿ 'ಇಗ್ನೊರಾಮಸ್' ಎಂದು ಹೇಳುತ್ತಾರೆ.

ದಡ್ಡರು—ಗಂಡಸರ ಸರಿಸಮಾನ ನಾವು ಎಂದು ತಮ್ಮ ಹಿರಿಮೆಯನ್ನು ತಗ್ಗಿಸಿ ವಾದಿಸುವ ಹೆಂಗಸರು.

ದಡಿ—ಕುಂಬಾರನ ಶತ್ರು.

ದಡಿಗ—ಬ್ಯಾಟುಮಾಡುವವನು; ಟೆನ್ನಿಸ್‌ನಲ್ಲಿ ಸೇವೆ ಸಲ್ಲಿಸುವವ.

ದಂಡಪ್ರಣಾಮ—ಅನುಗ್ರಹ ಲಭಿಸದೆ ಮಾಡಿದ ನಮಸ್ಕಾರ.

ದಂಡಯಾತ್ರೆ—ಕ್ರಿಕೆಟ್‌ನಲ್ಲಿ ಸೊನ್ನೆರನ್ನುಗಳನ್ನು ಗಳಿಸಿದ ದಾಂಡಿಗ ಬಯಲಿಗೂ, ಆಲಯಕ್ಕೂ ನಡುವೆ ನಡೆದದ್ದು.

ದಂಡು—ಸೋದರಮಾವನೇ ಇಲ್ಲದ ಜಾಗ.

ದಂಡೋಪದಂಡ—ದೊಂಬಿ, ದೊಣ್ಣೆಸಹಿತ ಜನರು ನುಗ್ಗುವಿಕೆ.

ದಂಡಂ—"ಎರಡೂ ಕೋಲಾಗೆ ದಂಡಂ ಎನಿಕ್ಕುಂ" ಆದ್ದರಿಂದ ಒಂದೇ ಸಾಕು; ದಂಡಂ ದಶಗುಣಂ ಭವೇತ್,–ಆದ್ದರಿಂದ ಮಕ್ಕಳ ತಪ್ಪಿಗೆ ಹಿರಿಯರನ್ನು ದಂಡಿಸಬೇಕಾಗುತ್ತದೆ.

ದತ್ತಯ್ಯ—ದಮ್ಮಯ್ಯನ ಹಿಂದೆ ಸದಾ ಬರುವವ.

ದಂತಕಥೆ—ಪುನರಪಿ ಜನನಂ ಪುನರಪಿ ಮರಣಂ.

ದಂತವಕ್ರ—ಸೊಟ್ಟಹಲ್ಲಿನ ಸಾಲು–ಶಿಶುಪಾಲನೆಯಲ್ಲಿ ಜಾಗರೂಕರಾಗದಿದ್ದರೆ, ದಂತವಕ್ರವಾಗುವುದಂತೆ.

ದಧಿಮುಖ—ಮೇಕೆ, ಕೋತಿಸವರಿದ ಮೊಸರನ್ನದೊಡನೆ.

ದನ—ಸರ್ವೇದನಾಃ ಸುಖಿನೋ ಭವಂತು; ಎಂಬುದೇ ಗೋರಕ್ಷಣ ಸಂಘದ ಕೂಗು.

ದನಧಾನ್ಯ—ತವುಡು.

ದನಸ್ಪತಿ—ಕೊಬ್ಬು ಬೆರಸಿದ ತುಪ್ಪ.

ದನಿ—ಹನಿ ಕೂಡಿದರೆ ಹಳ್ಳ; ದನಿ ಕೂಡಿದರೆ ಗದ್ದಲ.

ದಪ್ಪ—ಇರುವ ಕೊಬ್ಬನ್ನೆಲ್ಲ ಹೊಟ್ಟೆಯೊಳಗೆ ಅಡಗಿಸಿಕೊಂಡಿರುವವ; ದಪ್ಪ ಜನರು ಬಹಳ ಒಳ್ಳೆಯವರು, ಏಕೆಂದರೆ ಅವರು ಓಡಲಾರರು,ಆದ್ದರಿಂದ ಹೊಡೆಯಲಾರರು.

ದರ್ಪಭೂಷಣ—ಅಧಿಕಾರದ ದರ್ಪದಿಂದ ಕುಲಷಿತವಾದ ಕಚೇರಿ.

ದರ್ಪಯಾಗ—ಅಪಮಾನ.

ದರ್ಪಶಯನ—ಎದ್ದರೆ ಆಳಾಗಲಾರೆ. ಎಂದು ಮಲಗಿರುವವ

ದಂಪತಿ—ದಮ್ಮಿರುವ ಪತಿ; ಸಿಂಪತಿಗೆ ಕಾರಣರು.

ದಬ್ಬಾಳಿಕೆ—ಹಲವಾರು ಮೋಟಾರು ವಾಹನಗಳು ಮುಂದೆ ಸಾಗುವ ರೀತಿ.

ದಬ್ಬು—ಗ್ಯಾರೇಜು ತುಂಬ ಮೋಟಾರು, ದಬ್ಬುವವರಿಗೆ ಗತಿ ಇಲ್ಲ.

ದರ್ಭೆ—ಅಮೃತಕಲಶವನ್ನು ಇಟ್ಟಿದ್ದ ದರ್ಭೆಯನ್ನು ನೆಕ್ಕಿದರೆ, ನಾಲಗೆ ಸೀಳಿದ್ದೇ ಲಾಭ (ಸರ್ಪದ ಅನುಭವ).

ದಮಯಂತಿ—ಗಂಡನ ಅಡುಗೆ ಸಾಮರ್ಥ್ಯವನ್ನು ಮೆಚ್ಚಿ ಕೈಹಿಡಿದ ಮಡದಿ.

ದಮ್ಮಯ್ಯ—ದತ್ತಯ್ಯ ನೋಡಿ.

ದಯ—ಮಾಸಾಂಶಿಗಳಿಗೆ ಇದು ಎಲ್ಲವೆಂಬುದೇ ಹಿರಿಯರ ಮತ.

ದಯಾಸಮುದ್ರ— ದಯೆ ಇದ್ದರೂ ಆದರಿಂದ ಜನಕ್ಕೆ ಎಳ್ಳಷ್ಟೂ ಪ್ರಯೋಜನವಿಲ್ಲದ ಮನುಷ್ಯ; ನೀರಿದ್ದರೂ ಕುಡಿಯಲು ಒದಗದ ಸಮುದ್ರದಂತೆ

ದಯ್ಯ—ನಮ್ಮ ಬೆನ್ನ ಹಿಂದೆ ನಮ್ಮನ್ನು ಜನ ಬಯ್ಯುವ ರೀತಿ.

ದರಿದ್ರನಾರಾಯಣ—ಪೂಜೆಗೆ ಸಾಕಾಗುವಷ್ಟು ದತ್ತಿಗಳಿಲ್ಲದ ದೇವಸ್ಥಾನದಲ್ಲಿರುವ ಮೂರ್ತಿ.

ದರಿದ್ರನಾರಾಯಣಸೇವೆ—ದರಿದ್ರನನ್ನೇ ನಾರಾಯಣಸ್ವರೂಪನಾಗಿ ಭಾವಿಸಿ, ಅವನು ಎಂದೆಂದೂ ನಮ್ಮ ಸೇವೆ ಪಡೆಯುವಂತೆ ನಮ್ಮ ಕಣ್ಣಮುಂದೆ ಇರಲಿ ಎಂಬ ಪ್ರಾರ್ಥನೆ.

ದರೋಡೆಕಾರ—ಶ್ರೀಮಂತ, ಬಡವ ಎಂಬ ವ್ಯತ್ಯಾಸಗಳನ್ನು ಒಪ್ಪದವ.

ದಶಕಂಠ—ಮಲಗುವಾಗಲೆಲ್ಲ ಅಂಗಾತ ಬಿದ್ದಿರಬೇಕಾದವನು.

ದಕ್ಷ ಕನ್ಯೆ— ಜಾಣ ಹುಡುಗಿ.

ದಕ್ಷಿಣಾಯನ—ದಕ್ಷಿಣೆ ಹಂಚಬೇಕಾದ ಮುಹೂರ್ತ.

ದಾಡಿ—ಧಾರವಾಡದ ಭಾಷೆಯಲ್ಲಿ ಹಾನಿ.

ದಾಂಡೀವ—ಬ್ರ್ಯಾಡ್ಮನ್ ಬ್ಯಾಟು.

ದಾಂಡೀವಿ—ಇಳಿದಾಗಲೆಲ್ಲ ನೂರು ರನ್ನುಗಳನ್ನು ಪಡೆಯುವವ.

ದಾನ—ಪಾಪಿಗಳು ಸ್ವರ್ಗದ ದ್ವಾರಪಾಲಕರಿಗೆ ಹಂಚುವ ಲಂಚ; ಮಕ್ಕಳ ಮೇಲೆ ಸೇಡುತೀರಿಸಲು ಹಲವರು ಹೂಡುವ ಉಪಾಯ; ಸಮಾಧಾನವೇ ಅತಿ ಮುಖ್ಯ ದಾನ.

ದಾನಶೂರ—ಅನ್ಯಾಯವಾಗಿ ಗಳಿಸಿದ ಹಣ ಎಂದು ಪತ್ತೆಯಾದರೂ ಚಿಂತೆ ಇಲ್ಲ ಎನ್ನುತ್ತ ದಾನಮಾಡುವ ಶ್ರೀಮಂತರು.

ದಾನಿ—ಹತ್ತು ಜನರಿಂದ ಕೊಳ್ಳೆಹೊಡೆದ ಹಣವನ್ನು ಹನ್ನೊಂದನೆಯವನ ಉದ್ಧಾರಕ್ಕಾಗಿ ನೀಡುವವ; ಲೋಕದಲ್ಲಿ ಬಡತನವೂ ರೋಗ-ರುಜಿನಗಳೂ ಎಂದೆಂದಿಗೂ ಇರಲಿ ಎಂದು ಆಶಿಸುವವ.

ದಾನಿ ನಾನುತನ—ತಲೆ ತಿರುಗುವಿಕೆ.

ದಾನಿ ನೀನುತನ—ಪರರನ್ನು ಸ್ತೋತ್ರಮಾಡಿ ಅನುಕೂಲಗಿಟ್ಟಿಸಿಕೊಳ್ಳುವ ಅಭಿಲಾಷೆ.

ದಾಂಪತ್ಯಕಲಹ—ಇದನ್ನು ನಮಗೆ ತಾಯಿತಂದೆಯರೇ ಕಲಿಸುವುದು, ಗಂಡ-ಹೆಂಡಿರ ಜಗಳ ಕೊಂಡುಕೊಡೋ ತನಕ (ಗಾದೆ).

ದಾಮಾಷಾ—ಈತ ಯಾವ ರಾಜ್ಯವನ್ನಾಳಿದನೋ ತಿಳಿಯದು.

ದಾಯಾದಿ–ಅಡುಗೆ ಮಾಡುವಾಗ ಅಣ್ಣ ತಮ್ಮ; ಕೂತು ತಿಂಬಾಗ ದಾಯಾದಿ (ಗಾದೆ).

ದಾವಾಗ್ನಿ—ಕೋರ್ಟು-ಕಚೇರಿಗಳಲ್ಲಿ ಓಡಾಡುವಾಗ ತಟ್ಟುವ ಬಿಸಿ.

ದಾಸೋಹಂ—ನಮಗಿಂತ ಹೆಚ್ಚು ಶಕ್ತಿವಂತರನ್ನು ಕಂಡಾಗ; ಮಾವನಿಗೆ ಅಳಿಯ ಮಾಡುವ ನಮಸ್ಕಾರ ಅಥವಾ, ಅಳಿಯ ಮಾವನಿಗೆ.

ದಾಕ್ಷಿಣಾತ್ಯ—ಈತೆರನ ಭಾಷೆಯನ್ನು ಹಿಂದಿನ ನಾಟಕದಲ್ಲಿ ಯೋಧರಾಡು ವಂತೆ ಹೇಳಿದೆ; ಆದ್ದರಿಂದ ಡೆಕ್ಕನ್ನಿನವರೇ ಆಗಲೂ ಯೋಧರಾಗಿದ್ದಿರ ಬೇಕೆಂದು ತೋರುತ್ತದೆ.

ದಾಕ್ಷಿಣಾತ್ಯರು—ಆರಂಭದಲ್ಲೇ ಶೂರರು, ಅನಂತರ ಉದ್ದಕ್ಕೂ ಶೂರರು.

ದ್ರಾಕ್ಷಾಗೃಹ—ನಾಗರಿಕರ ಹೆಂಡದಂಗಡಿ.

ದ್ರಾಬೆ—ದೊಡ್ಡವರ ನೆರವಿಲ್ಲದ ಪಾಪಿ.

ದ್ರಾವಿಟ—ದ್ರಾವಿಡದೇಶದ ವಿಟ.

ದಿಗಂಬರರು—ಜನ್ಮತಃ ಎಲ್ಲ ಮನುಷ್ಯರೂ.

ದಿಗ್ದರ್ಶಕ—ತಾರಾಬಲ ಚೆನ್ನಾಗಿರುವವ.

ದಿಟ್ಟತನ—ಇತರರಲ್ಲಿ ಇದು ಕಂಡುಬಂದಾಗ ಮೊಂಡಾಟವೆನಿಸಿಕೊಳ್ಳುತ್ತದೆ.

ದಿವಸಧಾನ್ಯ—ರೇಷನ್ ಪದಾರ್ಥ.

ದಿವಾನಾಸ್ಪತ್ರೆ—ಅಂಥವರ ಶೂಶ್ರೂಷೆಗಾಗಿ.

ದಿವಾಳಿ—ಒಬ್ಬನ ದಿವಾಳಿಯಿಂದ ನೂರಾರು ಜನಕ್ಕೆ ದಿವಾಳಿಯಾಗುತ್ತದೆ; ಆದ್ದರಿಂದ ಇದೊಂದು ಶಂಖಾನುಶಂಖ.

ದ್ವಿಪುರದಹನ—ಹಿರೂಷಿಮ ನಾಗಸಾಕಿ ಎಂಬ ಎರಡು ನಗರಗಳ ನಾಶ.

ದ್ವಿಮುಖ—ಮನೆಯೊಳಗೊಂದು, ಹೊರಗೊಂದು; ಅಂಗಡಿಯೊಳಗೊಂದು ವರಮಾನ ತೆರಿಗೆಯವರೆದುರಿಗಿನ್ನೊಂದು.

ದ್ವಿರುಕ್ತಿ—ರಾಜಕಾರಣಪಟುಗಳ ಭಾಷಣ.

ದೀರ್ಘಾಯುಸ್ಸು—ನಂಟರಿಷ್ಟರ ಸಾವನ್ನು ನೋಡುವ ಸಂಕಟ; ಅನೇಕ ವರ್ಷಗಳ ಕಾಲ ಮರಣಭಯವನ್ನನುಭವಿಸಬೇಕಾದ ಶಿಕ್ಷೆ.

ದೀನನಾನುತನ—ನೈಚ್ಯಾನುಸಂಧಾನ.

ದೀನನೀನುತನ—ಇಂಪೀರಿಯಾಲಿಜಂ.

ದೀಪ—ಇದರ ಬುಡದಲ್ಲೇ ಕತ್ತಲೆ; ನಾಯಕನ ಅನುನಾಯಿಗಳೇ ಬೊಗಳು ವುದು.

ದೀಪಾವಳಿ—ಮಿಂದದ್ದೇ ದೀಪಾವಳಿ.

ದುಃಖಪ್ರಾರಬ್ಧ—ನೀತಿವಂತರ ಹಣೆಯಬರಹ.

ದುರ್ಜನರು—ಸಜ್ಜನರನ್ನು ದೇವರು ತನ್ನ ಬಳಿಗೆ ಸೆಳೆದುಕೊಳ್ಳುತ್ತಾನೆ ಎಂಬುದನ್ನು ಕೇಳಿ, ಎಚ್ಚರಗೊಂಡವರು.

ದುರ್ಭಿಕ್ಷ—ದುರ್ಭಿಕ್ಷದಲ್ಲಿ ಅಧಿಕಮಾಸ (ಗಾದೆ).
ದುರ್ಘಟ—ಒಡೆದ ಘಟವಾದ್ಯ.
ದುಂದುಗಾರ—ಈತನಿಗೆ ತುಂಬ ಜನ ನೆರವಾಗುತ್ತಾರೆ.
ದುಂದುಭೀ—ದುಂದುಗಾರಿಕೆಯ ಭಯ.
ದುರಭಿಮಾನ—ನಾನೊಬ್ಬನೇ ಈ ಹೆಣ್ಣಿಗೆ ತಕ್ಕ ಗಂಡು ಎಂದು ಯುವಕ ತಿಳಿಯುವುದು.
ದುರುಗುಟ್ಟು—ಏಕೆ ದುರುದುರನೆ ನೋಡುತ್ತಿದಾನೆ ಎಂಬುದೇ ಗುಟ್ಟು.
ದುರಂತನಾಟಕ— ಹಣ ವಸೂಲಾಗದೆ, ಸಾಲ ಏರಿ, ಪರದೆ ಮಾರಿ, ರಾತ್ರೋ ರಾತ್ರಿ ಕಂಪನಿ ಊರು ಬಿಡಬೇಕಾಗಿ ಬಂದಾಗ.
ದುಶ್ಶಾಸನ—ಕೆಟ್ಟ ಶಾಸನ.
ದುಷ್ಟ—ಹೊಟ್ಟೆ-ಬಟ್ಟೆಗೆ ಸಿಕ್ಕರೆ ಶಿಷ್ಯನಾಗಬಲ್ಲವ.
ದುಷ್ಟಚತುಷ್ಟಯ—ಮಹಾಭಾರತದ ಕಾಲದಲ್ಲಿ ದುಶ್ಶಾಸನ, ಕರ್ಣ, ಶಕುನಿ, ಸೈಂಧವ; ಈಗ ಯಾರಾದರೂ ನಾಲ್ವರು.
ದೂರದ ನಂಟರು—ನಮಗೆ ಅತಿ ಪ್ರಿಯರು.
ದೂರಾಸೆ—ಹತ್ತು ವರ್ಷಗಳ ನಂತರ ಹೀಗೆ, ಹಾಗೆ ಆಗಬೇಕೆಂಬ ಆಸೆ.
ದೂರು—ಹಗಲೆಲ್ಲ ದೂರಿದ ಪಾರ್ಟಿಯೊಳಕ್ಕೆ ರಾತ್ರಿಯಾಗುತ್ತಲೂ ತೂರಿದ.
ದೂರ್ವಾಸನೆ—ಕ್ಷಣದಲ್ಲಿ ಉಕ್ಕಿಬರುವ ಕೋಪ; ಇದು ಮೂಗಿನ ಮೇಲೆಯೇ ಸದಾ ಕೂತಿರುವುದರಿಂದ ವಾಸನೆ ಎಂದು ಹೇಳಲಾಗಿದೆ.
ದೆಸೆ—ಮತ್ತೊಬ್ಬರಿಗೆ ಒಳ್ಳೆ ದೆಸೆ ಕೂಡಿಬಂದರೆ ಸಹಿಸುವುದು ಕಷ್ಟ.
ದೇವದತ್ತ—ಯಃಕಶ್ಚಿತ್ ಪುರುಷ; ಆಕಳಿಕೆ.
ದೇವರು—ನಮ್ಮ ದೇವರ ಸತ್ಯ ನಾವೇ ಬಲ್ಲೆವು; ಇತರರಿಗೆ ಏನು ಗೊತ್ತು? ಅದಕ್ಕೇ ಅವರು ನಮ್ಮ ದೇವರು ಸುಳ್ಳೆಂದು ಹೇಳುವುದು.
ದೇಶ ದ್ರೋಹಿ—ಎದುರು ಪಕ್ಷದ ನಾಯಕ.
ದೇಶಾಭಿಮಾನ—ನಮ್ಮ ಜೀವವನ್ನು ದೇಶಕ್ಕಾಗಿ ಧಾರೆ ಎರೆಯುವ ಕೆಚ್ಚಿರುವವನ ಗುಣ; ದೇಶದ ಮೇಲೆ ಅಭಿಮಾನವಿಲ್ಲದವರು ಹೂಡುವ ಹೂಲಿ.
ದೇಶಾವರ—ದಮ್ಮಯ್ಯ, ದತ್ತಯ್ಯರ ವೈಖರಿ.

ದೇಹಶ್ರಮ—ಅನೇಕರಿಗೆ ಇದರ ಮೇಲೆ ತುಂಬ ಆದರ—ಇತರರು ಪಡುತ್ತಿದ್ದರೆ ಮಾತ್ರ.

ದೇಹಿ—ಇದನ್ನು ಉಚ್ಚರಿಸುವುದು ಬಲು ಕಷ್ಟವಾದ್ದರಿಂದ ತಲೆತಲಾಂತರದಿಂದಲೂ ಅನೇಕರು ಕಲಿತಿರುತ್ತಾರೆ.

ದೈ—ದೇಹೀತಿ ವಚನಂ ಕಷ್ಟಂ; ಆದ್ದರಿಂದ, ದೈ ಎಂದು ಹೇಳಿದರೂ ಸಾಕಂತೆ.

ದೈತ್ಯಗುರು—ಯುದ್ಧ ಸಾಮಗ್ರಿಗಳನ್ನು ತಯಾರಿಸಲು ಅನುಕೂಲಿಸುವ ವಿಜ್ಞಾನಿ.

ದೈತ್ಯೋಪಚಾರ—ಯಹೂದ್ಯರಿಗೆ ನಾಜಿ ಜರ್ಮನಿಯಲ್ಲೂ ಭಾರತೀಯರಿಗೆ ಮಲಾನ್‌ರಾಜ್ಯದಲ್ಲೂ ಸಿಗುವ ಉಪಚಾರ.

ದೊಡ್ಡತನ—ಕಿರಿತನದ ಜಾಡ್ಯ.

ದೊಣ್ಣೆ—ಮೂರ್ಖತನಕ್ಕೆ ಮೂರ್ಖರು ವಿಧಿಸುವ ಔಷಧ; ಕೈಯ್ಯಲ್ಲಿ ಶರಣಾರ್ತಿ ಮಾಡುವವರ ಕೊಂಕುಳಲ್ಲಿ ಕಂಗೊಳಿಸುವ ವಸ್ತು.

ದೊಣ್ಣೆವರಿಸೆ—ಪ್ರೈಮರಿ ಶಾಲಾ ಮಾಸ್ತರುಗಳು ಕಲಿತಿರಬೇಕಾದ ಪ್ರಥಮ ಪಾಠ.

ದೊಂಬಿ—ಪೋಲೀಸಿನವರಿಗಿದೊಂದು ಮನರಂಜನ ಕಾರ್ಯಕ್ರಮ.

ದೌರ್ಬಲ—ಎಂಥ ದುರ್ಬಲನಾದರೂ ಎಂ. ಎಲ್. ಎ. ಎನಿಸಿಕೊಂಡರೆ, ಅವನಿಗಿರುವ ವೋಟಿನಿಂದ ಕೈ ಎತ್ತಿ ಬಿಲ್ಲನ್ನು ಮುರಿಯಬಲ್ಲ ಬಲ.

ದೋಸೆ—ದೋಸೆ ತಿಂದಮೇಲೆ ದೋಷ ಹೇಳಬಾರದು, ಏಕೆಂದರೆ ದೋಷವೆಲ್ಲ ದೋಸೆ ನುಂಗಿತು ಎಂದು ಗಾದೆ ಹೇಳುತ್ತದೆ.

## ಧ

ಧರ್ಮ—ನಗುವು ಸಹಜಧರ್ಮ, ನಗಿಸುವುದು ಪರಧರ್ಮ, ನಗುವ ಕೇಳುತ ನಗುವುದತಿಶಯದ ಧರ್ಮ.

ಧರ್ಮಶಿಕ್ಷಣ—ಮಕ್ಕಳು ಅದರಂತೆ ನಡೆಯುವುದಿಲ್ಲ ಎಂಬ ನಂಬಿಕೆಯ ಮೇಲೆ ದೊಡ್ಡವರು ಅವರಿಗೆ ಧರ್ಮವನ್ನು ಬೋಧೆ ಮಾಡುತ್ತಾರೆ.

ಧನ—ಎಂಥ ದಡ್ಡನೂ, ಎಂಥ ದುಷ್ಟನೂ ಗಳಿಸಬಲ್ಲ ವಸ್ತು; ಆಪರೇಷನ್ನಿಂದ ವೈದ್ಯರು ಶ್ರೀಮಂತರಿಂದ ತೆಗೆಯುವ ವಸ್ತು.

ಧನದನ್ನೆ—ವರದಕ್ಷಿಣೆಗಾಗಿ ಕೈಹಿಡಿದ ಸತಿ.

ಧನವಂತರು—ಕವಿಗಳು ಕೊಂಡಾಡುತ್ತಿದ್ದ ಜನರು; ಈಗ ಅವರನ್ನು ಕೊಂಡಾಡುವವರು ಇತರರು.

ಧನಿಕರು—ನಂಟರಿಷ್ಟರು ನೂರಾರು ಜನ ನೆನಪಿನಲ್ಲಿರುವವರು.

ಧನಂಜಯರು—ಜೂಜಿನಲ್ಲಿ ಗೆದ್ದವರು.

ಧರ್ಮಸಂಕಟ—ಶೀಲವಂತರ ಸಮಸ್ಯೆ.

ಧರ್ಮಸತ್ರ—ಪಾರುಪತ್ಯಗಾರನಿಗೆ.

ಧರ್ಮಸ್ವಾತಂತ್ರ್ಯ—ನಮ್ಮ ಧರ್ಮವನ್ನು ನಮ್ಮಿಷ್ಟದಂತೆ ಆಚರಿಸಬಹುದೆಂದು ಇತರ ಧರ್ಮದವರು ಒಪ್ಪಿದಾಗ........

ಧರ್ಮಾತ್ಮ—ಗೊಡ್ಡು ವೇದಾಂತಿ.

ಧ್ಯಾನ—ಅವಕಾಶಸಿಕ್ಕಿದರೆ ಮಾಡಬಹುದಾಗಿದ್ದ ಪಾಪಗಳನ್ನು ಕುರಿತು ಮುದಿ ವಯಸ್ಸಿನಲ್ಲಿ ಚಿಂತಿಸುವುದು.

ಧಿಗ್ವಿಜಯ—ವಿಜಯವನ್ನು ಹಳಿಯುವಿಕೆ; ಅಶೋಕನ ಮನೋಭಾವ.

ಧೀರ—ಧೈರ್ಯವಿಲ್ಲ ಎಂದು ಒಪ್ಪಿಕೊಳ್ಳಲು ಧೈರ್ಯವಿಲ್ಲದವ.

ಧೀರೋದಾತ್ತನಾಯಕರು—ನಾಟಕ ನೋಡುತ್ತ ಕಡೆಯತನಕ ಕುಳಿತಿರುವವರು.

ಧುಮುಕು—ವಿಮಾನದಲ್ಲಿರುವವರಿಗೆ ಹಲವು ವೇಳೆ ಅದರ ಸಂಚಾಲಕರು ಹೀಗೆ ಹೇಳುವುದುಂಟು.

ಧುರಂಧರರು—ನೊಗಹೊತ್ತು ಚಾವಟಿಯ ಏಟಿಗಾಗಿ ಕಾದು ನಿಂತಿರುವವರು.

ಧೂರ್ತರಾಷ್ಟ್ರ—ನೆರೆರಾಷ್ಟ್ರ.

ಧೂರ್ತಾಂಡ—ತನ್ನ ಕೋಪದ ತಾಪದಿಂದ ಸುಟ್ಟುಬಿಡುತ್ತೇನೆಂದು ನೌಕರರನ್ನು ಹೆದರಿಸುವ ಅಧಿಕಾರಿ.

ಧೂಮಕೇತು—ಸದಾ ಹೊಗೆಬತ್ತಿ ಸೇದುವವ.

ಧೂಳು—ಕಚೇರಿಗಳಲ್ಲಿ ಕಾಗದಪತ್ರಗಳ ಮೇಲೆ ಕುಳಿತಿರುವ ಕಂಟಕ; ಮಿಠಾಯಿ ಅಂಗಡಿಗಳಲ್ಲಿ ಮಾರಲು ಇರಿಸಿರುವ ಪದಾರ್ಥಗಳ ತೂಕವನ್ನು ಹೆಚ್ಚಿಸುವ ವಸ್ತು; ಆಗಂತುಕರು ಬಂದು ಕುಳಿತು ನಮ್ಮ ಕುರ್ಚಿಗಳ ಮೇಲಿಂದ ತೆಗೆಯುವ ವಸ್ತು.

ಧೈರ್ಯ—ನಮಗೆ ಎಷ್ಟು ಧೈರ್ಯವಿರಬೇಕೆಂದರೆ, ಧೈರ್ಯ ಸಾಲದು ಎಂದು ನಮ್ಮನ್ನು ಟೀಕಿಸುವವರನ್ನೆದುರಿಸಲು ಎಷ್ಟು ಬೇಕೋ ಅಷ್ಟು.

ಧೋರಣೆ—ಬಡವರನ್ನು ಮೂದಲಿಸಿ ಕೆರಳಿಸುವ ಬಗೆಬಗೆಯ ಲೀಲಾವಿಲಾಸಗಳು.

## ನ

ನಕ್ತಂಚರ—ಬೀಟ್ ಪೋಲೀಸಿನವನು.

ನಕ್ರಬಾಷ್ಪ—ನಮಗೆ ದ್ರೋಹಮಾಡಿದವರ ಕನಿಕರ.

ನಕ್ಷತ್ರ—ನಕ್ಷತ್ರವಾದರೂ ಸ್ವಕ್ಷೇತ್ರದಲ್ಲಿರಬೇಕು. ಇಲ್ಲದಿದ್ದರೆ ಚಿತ್ರ ಹಾಳಾಗಿ ಹೋಗುತ್ತದೆ.

ನಕ್ಷತ್ರಲೋಕ—ಹಾಲಿವುಡ್ಡು.

ನಕ್ಷತ್ರಿಕ—ಸಿನಿಮಾ ತಾರೆಗಳ ಏಜಂಟು.

ನಕಾರ—ಮಡಗು ಮೂಲೆಗೆ ಹುಲು ನಕಾರವ (ಪು. ಸರಸ್ವತಿ).

ನಗರಪಿತುಃ—ನಗರ ಪಿತೃಗಳಿಗೆ, ಕೊಟ್ಟ ವೋಟೇ ಪಿಂಡ.

ನಗರವಾಸಿ—ನಗರವನ್ನು ತೊರೆದು ತಪ್ಪಿಸಿಕೊಳ್ಳಲು ದಾರಿಕಾಣದ ನಿರ್ಭಾಗ್ಯ ಪ್ರಾಣಿ.

ನಗ್ನಹೂ—ಹೆಂಡ ತಯಾರಿಸಲು ಮಾಡಿಕೊಳ್ಳುವ ಗಟ್ಟಿ; ಕುಡಿದ ಮೇಲಿನ ನಗ್ನತೆಗೆ ಇದೇ ಕಾರಣ.

ನಗು—ನಗುವ ನಗಿಸುವ ನಗಿಸಿ ನಗುತ ಬಾಳುವ ವರವ ಮಿಗೆ ನೀನು ಬೇಡಿಕೊಳೊ, ಮಂಕುತಿಮ್ಮ.

ನಗುಮಾನ—ಬಿಗುಮಾನವೇ ಇಲ್ಲದಿರುವಾಗ.

ನಚಿಕೇತಸ್—ಸಾಯೋ ಮಗನೇ ಎಂದು ತಂದೆ ಕೈಲಿ ಹೇಳಿಸಿಕೊಂಡು ಬದುಕಿದ ಧೀರ.

ನಚ್ಚು—ಪರಿಚಯವಿಲ್ಲದವರಲ್ಲಿ ನಚ್ಚಿಡಬಾರದು, ಸರಿ; ಆದರೆ, ಪರಿಚಿತರಾದವರೊಬ್ಬರಲ್ಲೂ ನಚ್ಚಿಡುವಂತೆಯೇ ಇಲ್ಲವಲ್ಲಾ, ಏನು ಮಾಡುವುದು?

ನಂಜಿ—ನಂಜಿಗೆ ಮದ್ದಿಲ್ಲ.

ನಟ್—ನಟ್ ಎಂದರೆ ಕುಣಿ, ಎಂದರ್ಥ; ಆದ್ದರಿಂದ, ಅದನ್ನು ಹತೋಟಿ-ಯಲ್ಲಿಡಲು ಬೋಲ್ಟ್ ಇದ್ದೇ ಇರಬೇಕು.

ನಟ—ಒಮ್ಮೆ ಶ್ರೀಮಂತ, ಒಮ್ಮೆ ಬಡವ ಎಂದು ಹಿಗ್ಗಿ ತಗ್ಗುವ ಮನುಷ್ಯ.

ನಡಿಗೆ—ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಬಡವರೂ ಅನಾಗರಿಕರೂ ಹೋಗುವ ರೀತಿ.

ನತದೃಷ್ಟ—ತಬ್ಬಲಿಯನ್ನು ನೋಡಿ.

ನಂಬಿಕೆ—ದೇವರನ್ನು ನಾವು ನಂಬಿದರೂ, ದೇವರಿಗೆ ನಮ್ಮಲ್ಲಿ ನಂಬಿಕೆ ಬರು-ವುದು ಕಷ್ಟ.

ನಮಸ್ಕಾರೀ—ಆರೋಪಣೆ ತಪ್ಪಿಸಿಕೊಳ್ಳಲು ನಮಸ್ಕಾರ ಮಾಡುವ ನೌಕರ; ಮುಟ್ಟಿದರೆ ಮುನಿ ಎಂಬ ಗಿಡ.

ನಯನರೋಗ—ಕಂಡದ್ದೆಲ್ಲ ಕೆಂಪಾಗಿ ತೋರುವ ರೋಗ.

ನಯಸೇನ—ತಕ್ಕುದೆ ಬೆರೆಸಲ್ಕೆ ಘೃತಮುಮಂ ತೈಲಮುಮಂ, ಎಂದು ಕಾಳ ಸಂತೆಗಾರರನ್ನು ಮೂದಲಿಸಿದ ಪ್ರಾಚೀನ ಕನ್ನಡ ವೀರಕವಿ.

ನವಕೋಟಿನಾರಾಯಣ—ಮಕ್ಕಳೊಂದಿಗ,

ನರಕ—ಭೂಲೋಕವನ್ನು ನಾವು ಪರಿವರ್ತಿಸಿರುವ ರೀತಿ.

ನರಕವಿ—ಕೀಳುಕವಿ.

ನರಭಕ್ಷಕ—ಪರಪುರುಷರನ್ನು ಬಹಳವಾಗಿ ಪ್ರೀತಿಸುವವ.

ನರಮೇಧ—ಮಾರಿಗೌತಣ.

ನರವಾಹನ—ಕುಬೇರರ ಕುತ್ಸಿತವಾಹನ.

ನರಿಕಥೆ—ನರಿಕಥೆ ಮುಂದೆ ಹರಿಕಥೆಯೇ ? ಚಾಡಿ.

ನರಿಷಡ್ವರ್ಗ—ಕುಹಕ, ಕುತಂತ್ರ.

ನರೆಕೂದಲು—ಜೀವನ ಸಂಗ್ರಾಮದಲ್ಲಿ ಸೋತೆ ಎಂದು ಸೂಚಿಸಲು ನಾವು ಹಾರಿಸುವ ಬಿಳಿಯ ಬಾವುಟ; ಪರಮ ಪದದಿಂದಂ ಅಟ್ಟಿದ ಪುರು-ಪರಮೇಶ್ವರನ ದೂತನ್.

ನರಂ ಸಚಿವ—ನರಂ ಆಗಿ ಕೂತ ಮಂತ್ರಿ.

ನವರಸ—ಹೊಸ ತರಹದ ಒಂದು ರಸಾಭಾಸ.

ನವಿಲು—ಕೋಳಿ ಅರಳಿದರೆ ಸಾಕು, ಈಗಿನ ಕಾಲಕ್ಕೆ ಅದೇ ನವಿಲು.

ನಶ್ಯ— ನೆಪೋಲಿಯನ್, ಚರ್ಚಿಲ್ ಮುಂತಾದ ಮಹಾಮಹಿಮರಿಗೆ ಸ್ಫೂರ್ತಿಯಿತ್ತ ಚೂರ್ಣ.

ನಷ್ಟವಕ್ರ—ನೌಕರಿ ಜೀವನದಿಂದ ತಾರುಣ್ಯದ ಡೊಂಕುಗಳೆಲ್ಲ ಮಾಯವಾದ ಪ್ರಾಣಿ.

ನಷ್ಟಾವಧಾನಿ—ವಿದ್ಯೆಯನ್ನೆಲ್ಲ ಮರೆತವನು.

ನಷ್ಟೋತ್ತರ—ಪರೀಕ್ಷಾ ಮಂದಿರಕ್ಕೆ ಉತ್ತರಗಳನ್ನು ಬರೆದುಕೊಂಡು ಹೋದ ಹುಡುಗ ಅದನ್ನು ಕಳೆದುಕೊಂಡಾಗ.

ನಸ್ಯಾಹಾರಿ—ಹೊಟ್ಟೆಗೆ ಹಿಟ್ಟಿಲ್ಲದಾಗ, ಮೂಗಿಗೆ ನಶ್ಯ ಏರಿಸಿ ಅದನ್ನು ಮರೆಯುವವ.

ನಂಟರು—ಗಂಟೆಲ್ಲ ತೀರಿದ ಮರುದಿನ ನಂಟರೇ ಗಂಟಲಿಗೆ ಗಾಣ.

ನಾಕ—ದೇವತೆಗಳ ಆನಂದಭವನ.

ನಾಕಬಲಿ—ಸ್ವರ್ಗದ ಬಲಿಯಾಯಿತೆಂಬ ಸೂಚನೆ ಕೊಡುವ ಒಂದು ಶಾಸ್ತ್ರ.

ನಾಗರಿಕ—ಹೆಂಡತಿಗೆ ಹೆದರುವವ; ಮುನಿದ ಕಾಂತೆಯ ಕುಪಿತ ವದನಾರವಿಂದದೊಳ್ ಮಿನುಗುವ ಎಳನಗೆ ತೋರುವನ್ನೆಗಂ ಚಿತ್ತದೊಳ್ ಕುದಿವ ನಾಗರಿಕ (ಲಕ್ಷ್ಮೀಶ).

ನಾಗರಿಕತೆ—ಮಾನವನ ಕತೆ ಮುಗಿಯುವುದು ಇದರಿಂದಲೇ.

ನಾಗಸಂಪಿಗೆ—ನಾಗಸಂಪಿಗೆ ಮುಡಿಯುವುದಕ್ಕೆ ನಾರುಬೇಕೆ, ಎಂಬ ಪ್ರಶ್ನೆ ಬಟ್ಟತಲೆಯವರಿಗೆ ಮಾತ್ರ ಅನ್ವಯಿಸುತ್ತದೆ.

ನಾಟಕ—ಸೀನರಿ ಮುಂತಾದ ಸಾಮಗ್ರಿಗಳನ್ನು ಮಾರುವ ಮೊದಲು ಕಂಪನಿಯವರು ಕಾಂಪ್ಲಿಮೆಂಟರಿ ಟಿಕೀಟಿನವರಿಗಾಗಿ ಆಡುವ ಆಟ.

ನಾಟಕಿ—ರಾಕ್ಷಸೀ ಸ್ವಭಾವವನ್ನು ತೋರಿಸಿ ಹೆದರಿಸುವವಳು.

ನಾಟ್ಯ—ಕಾಲಿಗೆ ಬುದ್ಧಿ ಹೇಳುವುದೇ ಇದರ ಅತಿಮುಖ್ಯವಾದ ಭಾಗ್ಯ.

ನಾತಾವರಣ— ವಾತಾವರಣ ಕೆಟ್ಟಾಗ.

ನಾಡಿ—ನಾಡಿ ಅರವತ್ತಾಗಲ್............? ಒಂದು ತಿಥಿ ಅಕ್ಕು.

ನಾದಾರಿ—ದಾನಿಗಳ ಮನೆಗೆ ದಾರಿ ಕಾಣದ ದರಿದ್ರ.

ನಾಪಿತ—ತಬ್ಬಲಿ.

ನಾಮ—ರಾವಣೋ ನಾಮ ರಾಕ್ಷಸಃ; ಅಯೋಧ್ಯಾ ನಾಮ ನಗರಿ; "ಸನಾಮ ಮಾತ್ರೇಣ ಕರೋತ್ಯರೋಗಂ".

ನಾಮಧಾರಿ—ಯಾರೋ ಇಕ್ಕಿದ ನಾಮವನ್ನು ಅಳಿಸದೆ ಹೊತ್ತುಕೊಂಡು ತಿರುಗುವವ; ಬಡಪಾಯಿ.

ನಾಯಕ—ವಿವಾಹಕಾಲದಲ್ಲಿ ಮಾತ್ರ ವರ........ನಾಯಕ.

ನಾಯಿ—ಬೊಗಳುವ ನಾಯಿ ಕಚ್ಚುವುದಿಲ್ಲ, ಬೊಗಳುವಾಗ, ಕೃತಜ್ಞತೆ ಹೇಗಿರಬೇಕೆಂದು ನಮಗೆ ಕಲಿಸಲು ಅವತರಿಸಿರುವ ಪ್ರಾಣಿ.

ನಾಯಿಕೆಮ್ಮಲು—ನರಜನ್ಮ ನಾಯಿಗೂ ಬೇಡ ಎಂದೆನಿಸುವ ಒಂದು ವ್ಯಾಧಿ.

ನಾಯಿತನ—ಕೀಚಕವೃತ್ತಿ; 'ನಾಯಿತನ ಬೇಡೆಲವೋ, ಕೆಡದಿರು, (ದ್ರೌಪದಿ); ನ್ಯಾಯವಬಿಟ್ಟನ್ಯಾಯವ ಮಾಡುವ ನಾಯಿಗೆ ನರಕವು ತಪ್ಪೀತೆ ? (ಪುರಂದರದಾಸರು).

ನಾರದ—ಪಿಸುಣ ಪಸರಿಗ.

ನಾರಾಜಜನಪದ—ನೃತ್ಯ ನಾಟಕಗಳಿಲ್ಲದ ಊರು.

ನಾರಿ—ಯತ್ರ ನಾರ್ಯಸ್ತು ಪೂಜ್ಯಂ, ಎಲ್ಲಿ ನಾರಿಯರಿಲ್ಲವೋ, ತೆರಪಂತೆ ತತ್ರ ದೇವತಾಃ; ನಾರಿ ಮುನಿದರೆ ಮಾರಿ ಎನ್ನುತ್ತೇವೆ; ಆದರೆ ಕೊಂಡು-ಕೊಳ್ಳೋರು ಯಾರು ?

ನಾರಿಕೇಳೀಪಾಕ—ಯೌವನ.

ನಾಲಿಗೆ—ಚಾಡಿಕೋರರ ಕೊಂಡಿ; ಪ್ರಜಾಸತ್ತಾತ್ಮಕ ಸರ್ಕಾರಗಳ ಶಸ್ತ್ರ; ಸ್ಟ್ಯಾಂಪಿರುವಷ್ಟು ನಾಲಗೆ ಚಾಚಬೇಕು (ಗಾದೆ); ಕುಲವನ್ನು ಬಯಲು ಮಾಡುವ ಅಂಗ; ತನು ವಾದ್ಯಂ, ನಾಲಗೆ ವಾದನ ದಂಡಂ.

ನಾಲ್ಕುಜನ—ಕಟ್ಟಕಡೆಗೆ ನಾಲ್ಕು ಜನರ ಮೇಲೆ ಭಾರಹಾಕುವುದೇ ಬುದ್ಧಿ-ವಂತರ ಲಕ್ಷಣ.

ನಾವಲಿಗ—ಕಾದಂಬರಿಕಾರ.

ನಾಶೀರ್ವಾದ—ಶಾಪ.

ನಾಷ್ಟವ್ಯಸನ—ಬೆಳಗ್ಗೆ ಏಳುತ್ತಲೂ ಅನೇಕರಿಗೆ ಇದೇ ಚಿಂತೆ.

ನಾಸ್ತಿಕಾಲಯ—ನೌಕರಿ ಖಾಲಿ ಇಲ್ಲ, ಎಂಬ ಬೋರ್ಡನ್ನು ತಗುಲಿಸಿರುವ ಕಾರ್ಯಾಲಯ; ಕಾರ್ಖಾನೆ.

ನಾಸ್ತಿವಂತ—ಇಲ್ಲ ಇಲ್ಲ ಎಂದು ಹೊರದೂಡುವ ಆಸ್ತಿವಂತ.

ನಾಳೆ—ಮನೆ ಮನೆಯ ಬಾಗಿಲಲ್ಲೂ ಬರೆದಿರುವ ಆಹ್ವಾನ; ಮದುವೆಗೆ ಇದೇ ಶುಭದಿನ; ಅತಿಶೀಘ್ರದಲ್ಲೇ ನಿನ್ನೆಮೊನ್ನೆಯಾಗುವ ದಿನ; ಸಾಲಗಾರರ ಮಂತ್ರ.

ನ್ಯಾಯ—ಲಕ್ಷ್ಮಿಯನ್ನು ಪಡೆಯಲು ನಾವು ಮಾಡುವ ಎಲ್ಲ ಪ್ರಯತ್ನಗಳೂ.

ನ್ಯಾಯಪತಿ—ಯಾವ ಪಕ್ಷದವರು ಒಳ್ಳೆಯ ಲಾಯರನ್ನಿಟ್ಟಿದಾರೆ ಎಂದು ತೀರ್ಪುಕೊಡುವಾತ.

ನಿಡಿಯರ್—ನಿಡಿಯುರ್ಗ್ಗಂ ನಿಡಿಯರೊಳರ್—ಎಂಬುದನ್ನರಿತಾಗ, ಎಂಥ ವನೂ ಗಳಿತಗರ್ವನಾಗುತ್ತಾನೆ.

ನಿಗಂಟು—ಗಂಟಿಲ್ಲದೆ ಅರ್ಥವನ್ನು ಬಿಡಿಸಿ ಬಿಡಿಸಿ ಹೇಳಿರುವ ನಿಘಂಟು; ಈ ಗ್ರಂಥವೇ ಅದಕ್ಕೆ ಒಂದು ಒಳ್ಳೆಯ ಉದಾಹರಣೆ.

ನಿಜ—ನಮ್ಮ ವಿಷಯವಾಗಿ ಯಾರಾದರೂ ಸುಳ್ಳು ಹೇಳಿದರೆ, ನಮಗೆ ಬರುವ ಕೋಪಕ್ಕಿಂತ ಹೆಚ್ಚಾಗಿ ಕೋಪ ಬರುವುದು ಸಹಜವೇ ಸರಿ.

ನಿಜಸ್ವಾತಂತ್ರ್ಯ—ದೇಶನಾಯಕರ ಇಷ್ಟ, ಅವರ ಅಭಿಮತ ಇವುಗಳಿಗೆ ತಕ್ಕಂತೆ ಹೇಳಲು ಎಲ್ಲರಿಗೂ ಸ್ವಾತಂತ್ರ್ಯ ಇರುವ ಪರಿಸ್ಥಿತಿ.

ನಿರ್ಜನಪ್ರದೇಶ—ಕಂದಾಯ, ಕುಡಿತ, ಕುಣಿತ, ಜೂಜು, ಕಾಳಸಂತೆ-ಯಾವುದೂ ಇಲ್ಲದ ಸ್ವರ್ಗ.

ನಿತ್ಯನಾಳೆ—ಸಾಲಗಾರನ ಸಬೂಬು.

ನಿದ್ರಾಂಗನೆ—ಈಕೆಗೆ ಉಪನ್ಯಾಸ, ಭಾಷಣ, ದೇವರ ಸ್ತೋತ್ರ, ಕಾದಂಬರಿ ವಾಚನ ಎಂದರೆ ತುಂಬ ಪ್ರೀತಿ.

ನಿದ್ದೆ—ಹಲವರು ಹೊರಳುವ, ನರಳುವ ಮಾತಾಡುವ, ಹಾಡುವ ಕಾಲ.

ನಿದ್ದೆಮಾತು—ಎಚ್ಚರವಾಗಿರುವಾಗ ಮಾತಾಡಲು ಅವಕಾಶ ದೊರೆಯದ ಪತಿ ದೇವರುಗಳು ನಿದ್ದೆಯಲ್ಲೇ ಮಾತಾಡಿ ಜಿಹ್ವಾ-ಚಾಪಲ್ಯ ತೀರಿಸಿ ಕೊಳ್ಳುತ್ತಾರೆ.

ನಿಧಾನ—ದಾನಮಾಡುವಾಗ, ನಿಧಾನವಾಗಿರಬೇಕಂತೆ; ದುಡುಕಿ ದಾನಮಾಡ ಬಾರದು; ಏಕೆಂದರೆ, ಆತನಿಂದ ನಮಗೇ ಏನಾದರೂ ಗಿಟ್ಟಿದರೂ ಗಿಟ್ಟಬಹುದು.

ನಿಪುಣ—ತನ್ನ ಅಜ್ಞಾನದ ಅರಿವನ್ನು ಸಂಪಾದಿಸುತ್ತಿರುವವ.

ನಿರ್ಬಂಧಕುಸುಮ—ಬೇಡಬೇಡವೆಂದರೂ, ಕುತ್ತಿಗೆಗೆ ಹಾಕುವ ಹೂಮಾಲೆ.

ನಿರಾಶಾವಾದಿ—ಉಭಯಸಂಕಟ ಬಂದಾಗ; ಎರಡನ್ನೂ ಬರಮಾಡಿಕೊಳ್ಳುವವ; ಅರ್ಧ ತುಂಬಿದ ಕೊಡವನ್ನು ನೋಡಿ, ಅರ್ಧ ಖಾಲಿಯಾಗಿದೆಯಲ್ಲಾ ಎಂದು ಗೋಳಿಡುವವ.

ನಿರಾಶೆ—ಪಂಚತಂತ್ರದಲ್ಲಿ ಗೂಳಿಯ ಹಿಂದೆ ಹನ್ನೆರಡು ವರ್ಷ ಅನುಸರಿಸಿದ ನರಿಗಳಿಗಾದ ಗತಿ.

ನಿರುದ್ಯೋಗಿ—ಸೋಮಾರಿ; ಪ್ರಭಾವಶಾಲಿಯಾದ ನಂಟನಿಲ್ಲದವ.

ನಿವಾತಕವಚ—ಚಳಿಗಾಳಿ ಮೈಗೆ ಸೋಕದಂತೆ ಮಾಡಿರುವ ಉಲ್ಲನ್ ಅಂಗಿ.

ನಿಶಾತೈಲ—ವಿದ್ಯಾರ್ಥಿಗಳಲ್ಲಿ ಕೆಲವರು ಇದನ್ನು ಉರಿಸುತ್ತಾರಂತೆ; ಮಿಕ್ಕವರು ವಿದ್ಯುಚ್ಛಕ್ತಿ ಬಲ್ಬುಗಳನ್ನೇ ಬಳಸುತ್ತಾರೆ.

ನಿಶ್ಚಿಂತೆ—ನಿತ್ಯದರಿದ್ರನಿಗೆ ಮಾತ್ರ.

ನಿಷಾಚರ—ಮದ್ಯಪಾನದಿಂದ ತತ್ತರಿಸುವವ.

ನಿಷ್ಠೂರ—ನಿಜವನಾಡಿದರೆ ನಿಷ್ಠೂರ; ಸುಳ್ಳಾಡಿದರೆ ಇಷ್ಟೂರ.

ನೀಚಕ—ಕೀಚಕನಷ್ಟೆ ನೀಚ.

ನೀತಿಬಾಧೆ—ಹಸುಗೂಸುಗಳನ್ನು, ದೊಡ್ಡವರು ತಿದ್ದುವಾಗ, ಅವರಿಗಾಗುವ ಫಲ.

ನೀತಿಶಾಸ್ತ್ರ—ಇದನ್ನು ಗುರುಗಳು ಶಿಷ್ಯರಿಗೆ ಬೋಧನೆ ಮಾಡುತ್ತಾರೆ.

ನೀರಾವರಿ ಕೆಲಸ—ಹಾಲಿನ ತಯಾರಿಕೆ? ಅಳುವುದು; ಅಥವಾ ಇತ್ತೀಚಿನ ನೀರಾ ಸರಬರಾಜು.

ನೀರು—ಭಾರತದಲ್ಲಿ ಇನ್ನೂ ಹಲವರು ದಾಹಪರಿಹಾರಕ್ಕಾಗಿ ಇದನ್ನೇ ಕುಡಿಯುತ್ತಾರೆ. ಆದರೆ, ನಾಗರಿಕರಾಷ್ಟ್ರಗಳಲ್ಲಿ ಇತರ ದ್ರಾವಕಗಳನ್ನು ಬಳಸಿಕೊಂಡಿವಾರೆ; ಇದನ್ನು ಹಾಲು ಎಂದು ಕರೆಯುವವರೂ ಉಂಟು; ಕೊನೆಯ ಗಳಿಗೆಯಲ್ಲಿ ಗಂಟಲಿಗೆ ನೀರು ಬಿಡುವುದರಿಂದ, ನೀರು ಕುಡಿದು ಸಾಯುವವರೇ ಹೆಚ್ಚು, ನಮ್ಮ ದೇಶದಲ್ಲಿ; ಹೆಂಡ ಕುಡಿದಲ್ಲ.

ನೀರುಗುಳ್ಳೆ—ಬದುಕು ನೀರಿನ ಮೇಲಿನ ಗುಳ್ಳೆ; ಅರೆಕ್ಷಣ ಮಳೆಬಿಲ್ಲು ಮಿನುಗಿಸಿ ವಾಯುವಾಗುವುದೇ ಧರ್ಮ.

ನೀಲನಡಿ—ಆಫ್ರಿಕಾಖಂಡದ ಭೂಪಟದಲ್ಲಿ, ಕೆಳಗಿನಿಂದ ಮೇಲಕ್ಕೆ ಹರಿಯುವ ಹೊಳೆ.

ನೀಳಕಂಠ—ಜಿರಾಫೆ ಮತ್ತು ಅದನ್ನನುಕರಿಸುವ ಮನುಷ್ಯರು.

ನುಂಗಸಿ—ಅಪಮಾನವನ್ನು ನುಂಗುವ ಪ್ರಾಣಿ.

ನುಂಗು—ಬೇವು ಬೆಲ್ಲದೊಳಿಡಲೇನು ಫಲ ? ಸುಲಭವಾಗಿ ನುಂಗಬಹುದು.

ನುಡಿ—ಅಂತರಂಗವನ್ನು ಬಹಿರಂಗಮಾಡದಿರಲು ಒದಗುವ ಒಂದು ಕಲೆ.

ನುಡಿಮದ್ದು—ಜನರನ್ನು ಉದ್ರೇಕಗೊಳಿಸುವ ಭಾಷಣ.

ನೂಕುನೂಕು—ಓಡುತ್ತಿದ್ದರೆ (ಬಸ್‌ನೊಳಗೆ) ನೂಕುನೂಕು; ನಿಂತರೆ, ಆಗಲೂ ನೂಕುನೂಕು.

ನೂನ—ನಡು ಮಧ್ಯಾಹ್ನ.

ನೂರು—ಕೊಳ್ಳುವಾಗ ನೂರು ನೂರೈದು; ಕೊಡುವಾಗ ನೂರು ತೊಂಬತ್ತೈದು.

ನ್ಯೂಪುರ—ನಗರದ ಹೊಸ ಬಡಾವಣೆ.

ನೃತ್ಯ—ಸಂಗೀತ ಕೇಳುತ್ತಲೂ, ಕೆಲವರಿಗೆ ಕಾಲುಗಳು ನೆಲದ ಮೇಲೆ ನಿಲ್ಲುವುದೇ ಇಲ್ಲ; ಆಗ ಅವರು ಮಾಡುವ ಚೇಷ್ಟೆಯೇ ನೃತ್ಯ.

ನೆಗಡಿ—ಮನುಷ್ಯರ ಮೂಗನ್ನು ಹಿಂಡಲು ಇದೊಂದಕ್ಕೆ ಸಾಧ್ಯವಿದೆ; ಮೂಗು ಕುಯ್ದರೆ ನೆಗಡಿ ಹೋಗುತ್ತದೆಯೆ ? (ಗಾದೆ); ನಮ್ಮ ತಲೆಯೊಳಗೆ ನಾಲ್ಕು ದಿನ ನಿಲ್ಲುವುದು ಇದೊಂದೇ; ನೆಗಡಿ ಹಿಡಿದ ನಾಯಿ ಬೇಟೆಗೆ ಅಪ್ರಯೋಜಕ (ಗಾದೆ).

ನೆಪ—ಹುಡುಕಿದರೆ ಬಲು ಬೇಗ ಸಿಕ್ಕುವುದು.

ನೆಯ್ಗೆಯವರು—ಸಾಹಿತಿಗಳು.

ನೆರೆಯವರು—ಇವರು ಹೊರೆಯವರಾಗದಿದ್ದರೆ ಪುಣ್ಯ: ನಮ್ಮ ಸಂಸಾರದ ವಿಷಯವನ್ನು ಇವರು ನಮಗಿಂತ ಚೆನ್ನಾಗಿ ಟೀಕಿಸಿ ಪ್ರಚಾರ ಮಾಡಬಲ್ಲರು.

ನೆರೆಹದ್ದು—ಸರಹದ್ದಿನಾಚೆ ಇರುವ ರಾಷ್ಟ್ರ.

ನೆಲ—ಇದು ಡೊಂಕಾಗಿರುವುದರಿಂದಲೇ, ಅನೇಕರ ಕುಣಿತ ತಪ್ಪುತ್ತಿರುವುದು; ಭೂಮಿ ಗುಂಡಾಗಿರುವುದರಿಂದ ನೆಲವೂ ಡೊಂಕು.

ನೆಳಲು—ಒಡಲಬಳಿ ನೆಳಲಿಂಗೆ ಗತಿ.

ನೈವೇದ್ಯ—ತೀರ ಹತ್ತಿರ ಹೋಗಿ, ಅಹವಾಲು ಹೇಳಿ, ಅದು ಆತನಿಗೆ ವೇದ್ಯವಾಗುವಂತೆ ಮಾಡುವುದು.

ನೊಣ—ಸ್ಯಾನಿಟರಿ ಇನ್ಸ್‌ಪೆಕ್ಟರ್.

ನೊಣಗಿಚ್ಚಿಯಾಟ—ಈ ಆಟದಲ್ಲಿ ಗೆಲ್ಲಬೇಕಾದರೆ, ಬಹಳ ಹೊತ್ತು ನೊಣ ಹೊಡೆಯುತ್ತಿರಬೇಕಂತೆ.

ನೋಪಥ್ಯ—ಪಥ್ಯವಿಲ್ಲದ ಔಷಧೋಪಚಾರ.

ನೋವು-ಹೆಚ್ಚು ತಿಂದದ್ದಕ್ಕೆ ಹೊಟ್ಟೆಯ ಪಶ್ಚಾತ್ತಾಪ; ತುಂಬಿದ ಹೊಟ್ಟೆಯ ತುಳುಕು.

ನೌಕರ—ಹೇಳಿದ ಕೆಲಸವನ್ನು, ಹೇಳಿದ ಕೂಡಲೇ ಮಾಡುತ್ತೇನೆ, ಎಂದು ಹೇಳಲು ಬದ್ಧನಾದವನು.

## ಪ

ಪಕ್ಕ—ಪಕ್ಕವಿದ್ದರೆ ಸಾಲದು, ಪಕ್ಷಿಗೆ; ಕೊಕ್ಕೂ ಇರಬೇಕು (ಗಾದೆ). ಪಕ್ಷಿಗೆ ಮಾತ್ರ ಇದು ಸಲ್ಲುವುದು ಎಂದು ತಿಳಿಯಬೇಡಿ.

ಪಕ್ಕದಮನೆ—ನಮಗೆ ಕಾಫಿಪುಡಿ, ಸಕ್ಕರೆ ಇತ್ಯಾದಿ ಸರಬರಾಜು ಮಾಡುವ ಸ್ಥಳ.

ಪಕ್ಕಸಾಲಿಗ—ಪಕ್ಕದಲ್ಲೇ ಮನೆಮಾಡಿಕೊಂಡು, ಸದಾ ಸಾಲ ಕೇಳುವವ.

ಪಕ್ಷ—ಪಕ್ಷ ಮಾಡುವವನು ರಕ್ಷಕನಾದಾನೆಯೆ ? (ರಾಜಕೀಯ ಗಾದೆ) ಪಕ್ಷ ಪಾಂಡವರಲ್ಲಿ ಆದರೂ, ಹಲವರು ಈಗಲೂ ಕೌರವರಲ್ಲಿ ಊಟಗಿಟ್ಟಿ ಸುತ್ತಿದಾರೆ. ತನ್ನ ಬಣ್ಣಿಸಬೇಡ. ಅನ್ಯರಿಗೆ ಅಸಹ್ಯ ಬೇಡ-ಸರಿ; ಆದರೆ, ತನ್ನ ಪಕ್ಷವ ಬಣ್ಣಿಸಬಹುದಂತೆ, ಅನ್ಯ ಪಕ್ಷವ ಹಳಿಯಬಹುದಂತೆ.

ಪಕ್ಷಪಾದ—ಒಂದೊಂದು ಪಕ್ಷದಲ್ಲೂ ಒಂದೊಂದು ಕಾಲನ್ನಿರಿಸಿಕೊಂಡು ಅನುಕೂಲ ಪಡೆಯುವವನು.

ಪಕ್ಷಪ್ರತಿಪಕ್ಷ—ಅಧಿಕಾರಕ್ಕೆ ಬಂದ ಪಕ್ಷಕ್ಕೆ-ಬದುಕುವ ಯೋಗ; ಅಧಿಕಾರಕ್ಕೆ ಬರದ ಪಕ್ಷಕ್ಕೆ ತದುಕುವ ಯೋಗ.

ಪಕ್ಷಪಾತ—ಪ್ರಜಾಸರ್ಕಾರಕ್ಕೆ ಹೊಡೆಯುವ ಖಾಯಿಲೆ; ಒಂದು ಪಕ್ಷಕ್ಕೆ ಅನುಕೂಲವಾದ ಗಾಳಿ; ಈ ಗಾಳಿಬಂದಾಗ, ಅದರೊಳಕ್ಕೆ ತೂರಿ-ಕೊಳ್ಳುವುದೇ ಜಾಣತನ.

ಪಕ್ಷಿಕಾಶಿ—ಕಾಶಿಯಲ್ಲಿ ಕೊಲ್ಲಬಹುದಾದ ಪಕ್ಷಿಗಳನ್ನು ನಾವು ಇಲ್ಲಿ ಕೊಲ್ಲು-ವಂತಿಲ್ಲ.

ಪಂಕ್ತಿಭೋಜನ—ಮಿಕ್ಕ ಕವಿಗಳಿಂದ ಪಂಕ್ತಿಗಳನ್ನು ಕಬಳಿಸುವ ಕೆಲಸ.

ಪಂಕ್ತಿಲಾಭ—ನಾವು ಮಾಡುವ ಅನಾಚಾರಕ್ಕೆ ಶಾಸ್ತ್ರದ ಪಂಕ್ತಿಯೊಂದರ ನೆರವು ಪಡೆಯುವುದು.

ಪಗಡೆ—ಪಾಂಡವರನ್ನು ಕೆಡಿಸಿದಕಾಯಿ, ಎನ್ನುತ್ತ, ಇದಕ್ಕೆ ಇಂದಿಗೂ ನಮ್ಮ ದೇಶದಲ್ಲಿ ಮನ್ನಣೆ ಕೊಡುವವರಿದಾರೆ.

ಪಗಾರಖಾನೆ—ಸಂಬಳ ಕೊಡುವ ಸ್ಥಳ.

ಪಚನಶೂರರು—ಏನು ತಿಂದರೂ, ಎಷ್ಟು ತಿಂದರೂ ಅರಗಿಸಿಕೊಳ್ಳಬಲ್ಲವರು.

ಪರ್ಚಸ್ವಿ —ಬೆಲೆ ಕೊಟ್ಟು ಕೊಂಡುಕೊಳ್ಳಬಲ್ಲವರು.

ಪಂಚಮಹಾಭಾಗ್ಯಗಳು—ಧನ, ಹಣ, ಆಸ್ತಿ, ಸ್ವತ್ತು, ಸಿರಿ.

ಪಂಚಮಹಾವಾದ್ಯ—ವಿಪರೀತ ಗೋಳಾಟ.

ಪಂಚವಾದ್ಯತಟ್ಟು—ಪಂಚವಾದ್ಯ ಬಾರಿಸಿದರೆ ಮಾತ್ರ ಮುಂದಕ್ಕೆ ಹೆಜ್ಜೆ ಇಡುವ ಕುದುರೆ.

ಪಂಚಾಮೃತ—ನಮ್ಮ ಪಾಲಿಗೆ ಬಿದ್ದದ್ದು.

ಪಂಚಾಯ್ತಿ—ಐದು ಜನರು ಸೇರಿದರೆ, ಆಗುವ ವಾಗ್ವಾದ.

ಪಟ—ಗಾಳಿ ಬಂದಾಗ ತೂರಿಕೊ ಎಂಬುದನ್ನರಿತಿದೆ, ಇದು.

ಪಿಕಧ್ಯಾನ—ಯಾವಾಗ ಕಾಕಶಿಶುಗಳನ್ನು ಕೆಳಕ್ಕೆ ತಳ್ಳುವುದು ಎಂಬ ಯೋ-ಚನೆ; ಉಂಡಮನೆಗೆ ಎರಡು ಬಗೆವ ಧ್ಯಾನ.

ಪಟ್ಟಣ—ಸೆಟ್ಟಿ ಬಿಟ್ಟಲ್ಲಿ ಪಟ್ಟಣ....ಆದರೆ ಬಿಡಬೆಕಲ್ಲ!........ನೂರಾರು ಸಂಸಾರಗಳು ಒಟ್ಟಿಗೆ ಬೇರೆ ಬೇರೆಯಾಗಿ ವಾಸಿಸುವ ಸ್ಥಳ.

ಪಟ್ಟವರ್ಧನ—ಬರೀ ಬಿರುದುಗಳನ್ನು ಮಾತ್ರ ಪೇರಿಸಿಕೊಂಡು ಮೆರೆಯುವವ.

ಪಟ್ಟೆಸೀರೆ—ಅಜ್ಜಿಗೆ ಪಟ್ಟೆಸೀರೆ ಸಿಗಬೇಕಾದರೆ—ಆದರೆ ಹೋದರೆ ಹತ್ತಿ ಬೆಳೆದರೆ....ಮಾತ್ರ.

ಪಟಾಟೋಪ—ಚಲಚ್ಚಿತ್ರಗಳನ್ನು ಅತಿಯಾಗಿ ಹೊಗಳಿ ಅಟ್ಟಕ್ಕೇರಿಸುವ ಪ್ರಚಾರ.

ಪಠ್ಯಪುಸ್ತಕ—ವಿದ್ಯಾರ್ಥಿ ಕರಭೂಷಣ.

ಪಡಖಾನೆ—ಸ್ವರ್ಗಕ್ಕೆ ಅಡ್ಡದಾರಿ.

ಪಂಡಿತ—ದಡ್ಡಮಗನ ತಂದೆ; ಆಶ್ರಯವಿಲ್ಲದೆ ಶೋಭಿಸಲಾರದವ.

ಪಂಡಿತವಕ್ಕಿ—ಕನ್ನಡವಕ್ಕಿ, ಗಿಳಿಪಾಠದಲ್ಲಿ ಪ್ರವೀಣತೆಯನ್ನು ಪಡೆದಿರುವುದರಿಂದ.

ಪಣ್—ಪಣ್ಣಂಗಿಟ್ಟೊಡೆ ಕಾಯಿ ಬಿದ್ದುದು....ಆದ್ದರಿಂದ ವೃದ್ಧರನ್ನೇ ಗುರುತಿಸಿ ಟೀಕಿಸಬೇಕು.

ಪತ್ರವಾಹನ—ಪೋಸ್ಟ್‌ಮ್ಯಾನ್.

ಪತ್ಯಾಗ್ರಹ—ಗಂಡನ ಮೊಂಡುತನ.

ಪತಿ—ದಂಪತಿಗಳಲ್ಲಿ ದಂ ಕಳೆದುಕೊಂಡವನು.

ಪತಿಕರಿಸು—ಮದುವೆಯಾಗು.

ಪತಿಬಿಂಬ—ಗಂಡನ ಫೋಟೊ.

ಪತಿಶಯ—ಸತಿಯ ಅಡುಗೆಯನ್ನು ಸವಿದಾಗ ಪತಿಗಾಗುವ ಅತಿಶಯದ ಮೆಚ್ಚುಗೆ.

ಪತ್ನಿ—ನನಸಾದ ಕನಸು.

ಪತ್ರಂಪುಷ್ಪಂ—ಮಾನಪತ್ರ, ಹೂಮಾಲೆ, ಹಣ್ಣು, ಹಂಪಲು, ಚಹ ಇತ್ಯಾದಿ ಸತ್ಕಾರ ಪರಂಪರೆ.

ಪತ್ರಿಕೆ—ಇತರ ಪತ್ರಿಕೆಗಳನ್ನು ಖಾರವಾಗಿ ಟೀಕಿಸುವುದರಿಂದಲೇ ಜನಪ್ರಿಯವಾಗಲೆಳಸುವ ಪ್ರಯೋಗ: ಲೋಕದ ಅಸಹ್ಯ, ಅನಾಹುತ, ಅಧರ್ಮಗಳನ್ನೆಲ್ಲ ಗುಡಿಸಿ ಕಟ್ಟಿ ನಮ್ಮ ಬಾಗಿಲಿಗೆ ಪ್ರತಿನಿತ್ಯವೂ ತಂದೊಡ್ಡುವ ಕಾಗದ.

ಪಥ್ಯಾಪವಾದ—ನಾವು ಬಹುದಿವಸದಿಂದ ಬಯಸಿದ ಪಾಪವನ್ನೇ ನಾವುಮಾಡಿದೆವು, ಎಂದು ನಮಗಾಗದವರು ಪ್ರಚಾರಮಾಡಿದಾಗ.

ಪಂಥ—ಮಹಾಜನೋ ಯೇನ ಗತಾಃ ಸ ಪಂಥಾಃ.... ಅಂದರೆ, ಮಹಾಜನರ

ಎಲ್ಲಿಗೆ ನುಗ್ಗುತ್ತಾರೋ, ಅಲ್ಲೇ ನಾವೂ ನುಗ್ಗಿ ಬಾಜಿ ಕಟ್ಟಿ ಜೂಜಾಡುವುದೊಳ್ಳೆಯದು.

ಪದವಿ— ಬದುಕಲು ಬೇರೆ ದಾರಿಕಾಣದೆ ತತ್ತರಿಸುವವರು, ಪದವಿಯನ್ನು ಮುಂದೊಡ್ಡಿ ನೌಕರಿ ಬೇಡುತ್ತಾರೆ; ಪದವಿ ವಿದ್ಯಾಭ್ಯಾಸದ ಮಟ್ಟ ವನ್ನು ತೋರಿಸುತ್ತದೆ.

ಪದ್ಯ—ಗದ್ಯ ರಚಿಸಲಾರದವರು ಸುಲಭದಲ್ಲಿ ಪದ್ಯ ಬರೆದು ಸೇಡು ತೀರಿಸಿ ಕೊಳ್ಳುವರು.

ಪದೇಪದೇ—ಪ್ರತಿಯೊಂದು ಪದ ಹೇಳಿದ ಮೇಲೂ ಹಲವರಿಗೆ ಒಂದು ಚಟ ಹತ್ತುವುದು....ನಶ್ಯ ಹಾಕುವುದು, ಗಂಟಲು ಸರಿಪಡಿಸಿಕೊಳ್ಳು-ವುದು, ನೀರು ಕುಡಿಯುವುದು ಇತ್ಯಾದಿ.

ಪಪಾಯಿ—ಅಕ್ಕತಂಗಿಯರ ಹಣ್ಣು ಎಂದು ಇದಕ್ಕೆ ಹೆಸರು; ಪಾಶ್ಚಾತ್ಯ ಗಿಡ ಪೌರ್ವಾತ್ಯಕ್ಷೇತ್ರದಲ್ಲಿ, ಆದ್ದರಿಂದ.

ಪಪ್ಪಿ—ಮಮ್ಮ, ಪಪ್ಪ ಎಂಬ ಆಂಗ್ಲ ಮಾತುಗಳನ್ನನುಕರಿಸಿ, ಅತೀ ನಾಗರಿಕ ಮನೆಗಳಲ್ಲಿರುವ ಕರೀ ದೊರೆಯರ ಮಕ್ಕಳು ತಾಯಿಯನ್ನು 'ಮಮ್ಮಿ' ಎಂದೂ ತಂದೆಯನ್ನು 'ಪಪ್ಪಿ' ಎಂದೂ ಕರೆಯುವರು.

ಪಪ್ಪಳಿ—ಪಾಪ್ಲಿನ್ ಎಂದು ಇಂಗ್ಲೀಷಿನವರು ಹೇಳುವುದು, ಇದನ್ನೇ.

ಪಂಪು—ನಗರಗಳಲ್ಲಿ ಚೌಕ ಚೌಕದಲ್ಲೂ ಇದನ್ನಿಟ್ಟು ಎಣ್ಣೆ ತೆಗೆದು ಕಾರು ಗಳಿಗೆ ತುಂಬುತ್ತಾರೆ.

ಪಯಣ—ಮರುಳ ಪಯಣಕ್ಕೆ ತರಗೆಲೆಯೇ ಸಂಗಡಿಗ.

ಪರ—ಪರವಾಗಿ ವಾದಿಸುವವರು, ಇಹವಾಗಿ ಏನು ಮಾಡುತ್ತಿದಾರೆ, ಎಂಬುದೇ ಪ್ರಶ್ನೆ.

ಪರದಾ—ಇನ್ನೂ ಸಾವಿರಾರು ಮಹಿಳಾಮಣಿಯರು ಆಚರಿಸಬಹುದಾದ ಪದ್ಧತಿ.

ಪರಪಿಂಡಿ—ಮಾವನ ಮನೆ ಕೂಳಿಗೆ ಕಾಯುವ ಅಳಿಯ.

ಪರಭಾರ್ಯಾಪುತ್ರರು—ಅನೇಕ ಮಹರ್ಷಿಗಳು.

ಪರಮತಸಹಿಷ್ಣುತೆ—ನಮ್ಮ ಬಲ ಕುಗ್ಗಿದೆ, ಎಂಬ ತಿಳಿವಳಿಕೆ ಇರುವಾಗ ಸಹನೆಯೇ ಗತಿ.

ಪರಶುರಾಮಕ್ಷೇತ್ರ—ಇಲ್ಲಿ ಜನ ಸದಾ 'ಕೊಡಲಿ', 'ಕೊಡಲಿ' ಎಂದು ಕೂಗುತ್ತಿರುತ್ತಾರೆ.

ಪರಸ್ತ್ರೀ—ಬಣ್ಣಿಸಲಸಾಧ್ಯವಾದ ಹೆಂಗಸು.

ಪರಾನ್ನಂ—ಪ್ರಾಣರಕ್ಷಣಂ.

ಪರಾರಿ—ಶತ್ರುವಿನ ಶತ್ರು, ಅಂದರೆ, ಮಿತ್ರ.

ಪರಿಚಿತ—ಈತನಿಂದ ಕೈಸಾಲ ಪಡೆಯಬಹುದೇ ಹೊರತು ಕೊಡಬಾರದು.

ಪರಿವಾರ—ನಮ್ಮ ಪರಿವಾರವನ್ನೂ ಕುಟುಂಬದೊಂದಿಗೆ ಕರೆದುಕೊಂಡು ಬರಬೇಕೆಂತ ಆಹ್ವಾನಿಸುತ್ತಾರೆ, ಹಲವರು ಮದುವೆಗಳಿಗೆ.... ಆದರೆ, ಅವನ್ನು ಜಮಾಯಿಸಿ ಅಲ್ಲಿಗೆ ಸಾಗಿಸದೆ ಇರುವುದೇ ಮೇಲು.

ಪರಿಹಾರ—ಕೊಂದ ಪಾಪ ತೀರಬೇಕಾದರೆ ಕೊಂದದ್ದನ್ನು ತಿಂದೇಬಿಡಬೇಕಂತೆ.

ಪರಿಹಾಸ—ನಮಗಾಗದವರನ್ನು ನಾವು ಟೀಕಿಸುವ ಬಗೆ.

ಪರೀಕ್ಷುಬ್ಧ—ಪರೀಕ್ಷೆಯಿಂದ ಕಳವಳಗೊಂಡ.

ಪರೀಕ್ಷೆ—ಚಿಕ್ಕದೇವರಾಜನ ಆಳ್ವಿಕೆಯಲ್ಲಿ ದೀಪದೊಳ್ ಸ್ನೇಹಹಾನಿ, ರತ್ನದೊಳ್ ಪರೀಕ್ಷೆ; ಅಂದರೆ ರತ್ನಗಳಿಗೆ ಮಾತ್ರ ಪರೀಕ್ಷೆ; ಅಂದರೆ, ಸೆಲೆಕ್ಷನ್ ಎಕ್ಸಾಮಿನೇಷನ್ ಇತ್ತು ಎಂದಾಯಿತು.

ಪರೋಪಕಾರ—ಬೆಕ್ಕಿಗೆ ಆಹಾರ, ಇಲಿಗೆ ಪರೋಪಕಾರ; ನಾವು ಇತರರಿಗೆ ಸಹಾಯ ಮಾಡಬೇಕು ಎಂದು ನಮಗೆ ಹೇಳುತ್ತಾರೆಯೇ ವಿನಹ, ಅವರಿಗೆ ಅದೇ ರೀತಿ ಉಪದೇಶಿಸುವವರು ಒಬ್ಬರೂ ಇಲ್ಲವಲ್ಲಾ....

ಪಲಗಂಡ—ಇಟ್ಟಿಗೆ ಕೆಲಸದವರಿಗೆ ಈ ಕೆಟ್ಟ ಹೆಸರು ಯಾಕೆ ಬಂತೋ ತಿಳಿಯದು.

ಪಲಾಯನಸೂತ್ರ—ಮತ್ತೆ ದಂಡೆತ್ತಿ ಬಂದು ಶತ್ರುವನ್ನು ಜಯಿಸುತ್ತೇನೆ ಎಂಬ ಛಲದಿಂದ, ಅದಕ್ಕಾಗಿ ಅತಿವೇಗವಾಗಿ ಹೋಗುವ ಪದ್ಧತಿ.

ಪರ್ವತ—ಪರ್ವತವನೇರಿದಡೆ ಗರ್ವ ತನಗೇಕಯ್ಯ ? ಎಂಬ ಸರ್ವಜ್ಞನ ಮಾತನ್ನು ಜನ ಈಚೆಗೆ ಗೌರವಿಸುತ್ತಿಲ್ಲ.

ಪಶ್ಚಾತ್‌ಪಾಪ—ಆನಂತರ ಆವೇಳೆಯಲ್ಲಿ ಎಂಥ ಅವಸರವನ್ನು ಕಳೆದುಕೊಂಡೆ ಎಂದು ಪಶ್ಚಾತ್ತಪಿಸಿ ಪಾಪವನ್ನು ಮಾಡುವುದು.

ಪಶ್ಚಿಮಬುದ್ಧಯಃ—ಪಾಶ್ಚಾತ್ಯದೇಶದಲ್ಲೇ ನಾಗರಿಕತೆ ಎಂಬ ತಪ್ಪು ಬುದ್ಧಿ.
ಪಶು- ಹುಟ್ಟುವಾಗ ಶಿಶು, ಬೆಳೆದಾಗ ಪಶು.
ಪಸಂದ್‌ಕಾಲ— ಮನೋರಾಜ್ಯದ ವಸಂತಕಾಲ.
ಪಾಕರಿಪು— ಅಡಿಗೆ ಮುಗಿಯುವ ತನಕ ಕಾಯಲು ತಾಳ್ಮೆ ಇಲ್ಲದೆ ಒಳನುಗಿ ಬಡಿಸು ಎನ್ನುವವ.
ಪಾಕರಿಪು ತನಯ—ಅಡಿಗೆಯವನ ಮಗ.
ಪಾಕಶಾಸನ—ಹೋಟಲ್‌ಗಳಲ್ಲಿ ಊಟ–ತಿಂಡಿಗಳ ಸಂಖ್ಯೆ, ಬೆಲೆ, ಪ್ರಮಾಣ ಮುಂತಾದವುಗಳನ್ನು ನಿರ್ಣಯಿಸುವ ಶಾಸನ.
ಪಾಕಶಾಸನಿ—ಹೆಂಡತಿ. ಅಡಿಗೆ ಏನು ಎಂದು ಶಾಸನ ಮಾಡುವವಳು.
ಪಾಕಶಾಸ್ತ್ರ—ಶಾಕಾದಿಗಳನ್ನು ಹಾಳುಮಾಡುವ ವಿಧಾನ; ನಾರಿಕೇಳಪಾಕ, ದ್ರಾಕ್ಷಾಪಾಕ ಮುಂತಾದವುಗಳನ್ನು ಇತ್ಯರ್ಥಪಡಿಸುವ ಶಾಸ್ತ್ರ.
ಪಾಕಸ್ಥಾನ—ಸಾಹಿತಿಯ ಕೊಠಡಿ.
ಪಾಕ್ಚಾತುರ್ಯ—ಪಾಕಿಸ್ಥಾನದ ರಾಜನೀತಿ.
ಪಾಕಿಸ್ಥಾನ—ಜನ್ನಡಿಯೊಳಗಣ ಗಂಟನ್ನು ಪಡೆದ ಬಗೆ.
ಪಾರ್ಕೋಟಕ—ಪಾರ್ಕುಗಳಲ್ಲಿ ಕುಳಿತಿರುವವರನ್ನು ಕಾಡಿಸುವ ಭಿಕ್ಷುಕ.
ಪಾಠದೋಷ—ನಮಗೆ ಅರ್ಥವಾಗದ ಪಾಠಭಾಗ,
ಪಾಣಿಗ್ರಹಣ—ಕೈಕೊಟ್ಟರೆ, ತೀರಿತು.
ಪಾಣಿಪೀಡನ—ವಧೂವರರು ಕೈ ಕೈ ಹಿಸುಕಿಕೊಳ್ಳುವುದು.
ಪಾತರಗಿತ್ತಿ—ಬಣ್ಣ ಹಾಕಿಕೊಂಡು ಕುಣಿಯುವ ಒಂದು ತರದ ಹುಳ.
ಪಾದಚಾರಿ—ಹಳೆಯ ಕಾರನ್ನು ಅಗ್ಗವಾಗಿ ಕೊಂಡುಕೊಂಡ ಅವಿವೇಕಿ; ಗಂಡುಮಕ್ಕಳಿರುವ ಕಾರೊಡೆಯ; ಲಾರಿಗಳೆಲ್ಲ ಈತನನ್ನೇ ಹಿಂಬಾಲಿಸ ಹತ್ತುವುವು.
ಪಾದಪೂಜೆ—ಒದ್ದು ಕಳುಹಿಸುವುದು.
ಪಾಪ—'ಪಾಪವೆಂಬುದದೇನು ಸುಲಭಸಾಧನೆಯಲ್ಲ' (ಮಂಕುತಿಮ್ಮ) ಪಾಪದ ನಿಜಸ್ವರೂಪವನ್ನರಿಯದವರು ಶಪಿಸುತ್ತಾರೆ, ಅರಿತವರು ಶಾಪವಿಮೋಚನೆಗೆ ಉಪಾಯ ಹೇಳುತ್ತಾರೆ.

ಪಾಪಿ— ಪಾಪಿ ಬಸ್ಸಿಗೆ ಹೋದರೆ, ಪೆಟ್ರೋಲೇ ನಾಸ್ತಿ (ಗಾದೆ). ಸಮುದ್ರವನ್ನು ಈತ ನಡೆದೇ ದಾಟಬಲ್ಲ; ಏಕೆಂದರೆ, ಆವನು ಸಮುದ್ರಕ್ಕೆ ಹೋದರೆ, ನೀರು ಮೊಣಕಾಲದ್ದವೇ; ಪಾಪಿ ಬಸ್ಸಿನಲ್ಲಿ ಕೂತರೆ, ಮೊಣಕಾಲು ಮಡಿಸಲು ಜಾಗ ಇಲ್ಲ (ಗಾದೆ).

ಪಾಮರ—ಇದನ್ನು ಕಡಿದು ಬೀಳಿಸಲು ಪಂಡಿತರೆಲ್ಲರೂ ಶ್ರಮಿಸುತ್ತಾರೆ.

ಪಾಮರಜನ—ಇವರಿಗೆ ಯಾವುದು ರುಚಿಸುತ್ತದೆ ಎಂಬುದು ಸಿನಿಮಾ ನಿದರ್ಶಕರಿಗೆ ಮಾತ್ರ ಚೆನ್ನಾಗಿ ಗೊತ್ತಂತೆ.

ಪಾಯಾಸ—ಪಾಯಸ ಕುಡಿದನಂತರದ ಆಯಾಸ.

ಪಾರಿಜಾತ—ಶ್ರಮ ಒಬ್ಬರಿಗೆ, ಫಲ ಮತ್ತೊಬ್ಬರಿಗೆ ಎಂಬ ಆರ್ಥಿಕ ತತ್ವಕ್ಕೆ ಉದಾಹರಣೆ.

ಪಾಲು— ದಶರಥನ ಪುತ್ರಕಾಮೇಷ್ಟಿಯಾಗದಂದಿನಿಂದ, ಪಾಲಿಗೆ ಬಂದದ್ದೇ ಪರಮಾನ್ನ ಎಂಬುದೇ ಸ್ತ್ರೀಯರ ಅಭಿಮತ; ಪಾಲಾದ ಕೂಡಲೇ ಪೋಲು (ಗಾದೆ).

ಪಾವಕ—ನೈನಂ ದಹತಿ ಪಾವಕಃ ಎಂದು ಕಲ್ನಾರಿನ ವಿಷಯವಾದ ಉಕ್ತಿ ಇದೆ; ಆದ್ದರಿಂದ, ಆತ್ಮನೂ ಕಲ್ನಾರ್ ಸ್ವರೂಪ ಎಂದ ಹಾಗಾಯಿತು.

ಪಾಶ್ಚಾತ್ಯರು—ಆಕಾಶದಲ್ಲಿ ಹಾರಬಲ್ಲವರು, ನೀರೊಳಗಿಂದ ತೂರಬಲ್ಲವರು, ಆದರೆ, ನೆಲದ ಮೇಲೆ ಬಾಳಲರಿಯದವರು.

ಪಾಷಂಡಿ—ನಮ್ಮ ದಾರಿಯನ್ನು ಹಿಡಿಯದೆ, ಸ್ವರ್ಗಕ್ಕೆ ಬೇರೆ ದಾರಿ ಹುಡುಕುವವ.

ಪಾಸು—ಕಾಲೇಜು ಜೀವನದಿಂದ ತಪ್ಪಿಸಿಕೊಳ್ಳುವ ಸಲುವಾಗಿ ಕೆಲವರು ಇದನ್ನು ಮಾಡಿ ಬಿಡುತ್ತಾರೆ; ಶ್ರೀಮಂತ ಹುಡುಗರು ಪರೀಕ್ಷೆ ಪಾಸು ಮಾಡುವುದಕ್ಕಿಂತ, ಮುಂದೆ ಹೋಗುವ ಕಾರನ್ನು ಪಾಸು ಮಾಡುವುದೇ ಶ್ರೇಷ್ಠ ಎಂದು ಭಾವಿಸಿ ಧಾವಿಸುತ್ತಾರೆ.

ಪಾಸಂಡಿ—ಪಾಸನ್ನು ದುರುಪಯೋಗಿಸಿ ಪ್ರಯಾಣ ಮಾಡುವವ.

ಪಿಂಗ್‌ಪಾಂಗ್—ಚೀನೀ ರಾಜಕಾರಣಪಟುಗಳ ಆಟ.

ಪಿಟೀಲು—ಇದನ್ನು ಬಾರಿಸುವವರು ಕುತ್ತಿಗೆ ಕೆಳಗೆ ಸಂಗೀತದಲ್ಲಿ ಮುಳುಗಿರು-

ತ್ತಾರೆ; ಹಲವರು ಇದನ್ನು ಹಿಡಿದು ಕುಳಿತಾಗ, ಇನ್ನೂ ಅಯ್ಯೋ, ಕುಯ್ಯುತ್ತಾರಲ್ಲಾ ಎನಿಸುತ್ತದೆ.

ಪಿಡುಗ— ಕಡುಬಿನೊಂದಿಗೆ ಬರುವವ.

ಪಿತಾ—ನರಳುವ ಜೀವವೊಂದರ ಜನ್ಮದಾತಾ; ಹಿಂದಿನ ಜನ್ಮದಲ್ಲಿ ಸಾಲ ತೀರಿಸದವ.

ಪಿತೃಪಕ್ಷ—ಗಂಡಹೆಂಡಿರ ಜಗಳದಲ್ಲಿ ತಂದೆಯ ಪಕ್ಷ ವಹಿಸುವ ಮಗು.

ಪಿತ್ತಭ್ರಮೆ—ಪಿತ್ತ ತಲೆಗೇರಿದಾಗ ಉಂಟಾಗುವ ಚಿತ್ತಭ್ರಮೆ.

ಪಿತ್ತಮಾಂಗ—ತಲೆ; ಪಿತ್ತ ಇಲ್ಲಿಗೇ ಏರುವುದು.

ಪಿತ್ತಶುದ್ಧಿ—ಲಿವರ್ ಟಾನಿಕ್.

ಪಿತ್ತವಿಲಾಸಪ್ರಹಸನ—ಭಂಡವಾಳಶಾಹಿ; ಹಿಟ್ಲರ್ ಮುಂತಾದವರ ಜೀವನ.

ಪಿತ್ತೇಶ್ವರ—ಕುಬೇರ.

ಪಿಸುಗುಟ್ಟು—ಗುಟ್ಟನ್ನು ರಟ್ಟುಮಾಡುವ ರೀತಿ.

ಪೀಠ—ಆಧುನಿಕರು ಇದಕ್ಕೆ ನೀಠ ಎನ್ನುತ್ತಾರೆ; ಭೂಮಿಗೆ ತಾವು ಭಾರವಾದೇವೋ ಎಂಬ ಭಯದಿಂದ ಅನೇಕರು ಇದರ ಮೇಲೆ ಕೂಡುತ್ತಾರೆ.

ಪೀಡಿಕೆ—ಗ್ರಂಥ ಓದುವ ಪೀಡೆಗೆ ತಲೆ ಕೊಟ್ಟವರು. ಇದನ್ನು ಓದಿ ಮುಂದಕ್ಕೆ ಹೋಗಬೇಕೆಂಬುದು ಗ್ರಂಥಕರ್ತನ ಆಸೆ.

ಪೀಪಾಯಿದಂಗೆ—ಹೆಂಡ ಕಡಮೆಯಾಯಿತು ಎಂಬ ಕಾರಣದಿಂದ ತೊಡಗಿದ ದಂಗೆ.

ಪೀರಂಗಿ—ಭಾರಿ ದೊಡ್ಡ ಮನುಷ್ಯ (ಇಂಗ್ಲೀಷಿನಲ್ಲಿ) ಇದರ ಹೊಟ್ಟೆಯಲ್ಲಿ ತುಪಾಕಿ ಹುಟ್ಟಬಾರದು, ಎಂಬುದು ಅನೇಕರಿಗೆ ತಿಳಿಯದು.

ಪುಚ್ಛವಾದ—ಬಾಲವಿರುವುದೆಲ್ಲ ಕುದುರೆ, ಡಿಗ್ರಿ ಇರುವವರೆಲ್ಲ ಜಾಣರು—ಎಂಬವಾದ.

ಪುಟನಗೆ—ಹಾಸ್ಯದ ತುಣಕನ್ನು ಕೇಳಿದ ಕೂಡಲೇ ಗೊಳ್ಳೆನ್ನುವುದು.

ಪುಂಡ—ಈತ ನಮ್ಮ ಗೆಳೆಯನಾದರೆ, ನಾವು ಅವನನ್ನು ಖಂಡಿತವಾದಿ, ಛಲವಾದಿ ಎಂದು ಮೆಚ್ಚುತ್ತೇವೆ.

ಪುಣ್ಯ—ಹುಲಿ ಶಿಕಾರಿಗೆ ಎಂದು ಹೊರಟಾಗ, ಹುಲಿ ಸಿಗದಿರುವುದೇ ಪುಣ್ಯ.

ಪುಣ್ಯಕೋಟಿ—ಸಾಧು ಎನಿಸಿಕೊಂಡ ಹಸು; ದುಷ್ಟರಿಗೆ ಸತ್ಯಾಗ್ರಹ ಬೋಧಿಸುವ ಗುರು.

ಪುತ್—ಹೇಸರುಕತ್ತೆಗಳಿಗಾಗಿ ರಚಿತವಾಗಿರುವ ನರಕದ ಒಂದು ಬಡಾವಣೆ.

ಪುತ್ರವ್ಯವಹಾರ—ಮಗನಿಂದ ಬರುವ ತಗಾದೆ ಕಾಗದಗಳು.

ಪುತ್ರಹಿಂಸೆ—ಕೆಲಸವಿಲ್ಲದ ಬಡಗಿ (ಮತ್ತು ಇತರರು) ಮನೆಯಲ್ಲಿ ಕೂತು ಮಾಡುವ ಕೆಲಸ.

ಪುನರ್ಜನ್ಮ—ಮಾಡಿದ ಪಾಪಗಳಿಗಾಗಿ ಪರಿತಪಿಸಲು ದೇವರು ಕೊಡುವ ಮತ್ತೊಂದವಕಾಶ.

ಪುನರ್ವಿವಾಹ—ಅನುಭಾವವನ್ನು ಮೀರಿದ ಆಸೆ.

ಪುರಂದರದಾಸ—'ತಸ್ಯ ವಿತ್ತಂ ಹರಾಮ್ಯಹಂ' ಎಂಬ ದೇವನುಡಿಯನ್ನು ನಿಜವೆಂದು ಕಂಡುಕೊಂಡಾತ.

ಪುರಾಣ—ಪುರಾಣವಾದ ಮಾತ್ರಕ್ಕೆ ಪೂರ್ತಿ ಕೇಳಬೇಕಾಗಿಲ್ಲ (ಗಾದೆ).

ಪುರಾಣವೈರಾಗ್ಯ—ಪುರಾಣ ಕೇಳಿ ಕೇಳಿ, ಇದನ್ನಿನ್ನು ಕೇಳಬಾರದು, ಎಂಬ ಸಂಕಲ್ಪ.

ಪುಲ್ಲಕಿತ—ಭೂಮಿತಾಯಿಯ ಪುಲಕವೇ ಹುಲ್ಲು ಎಂಬ ಕವಿಗಳ ಹೇಳಿಕೆಯನ್ನು ನೋಡಿ.

ಪುಲಿ—ಕಲಿತನದಿಂದಂಲೋಗರ್ ಪುಲಿಯಂ ಪಿಡಿದೊಡಂ ಅದೇಂ ಬಿಡೆಂಬರ್!

ಪುಸ್—ಪುಲಿ ಪುಸ್ಸಾಯಿತು.

ಪುಸ್ತಕ—ಮನುಷ್ಯನ ಜ್ಞಾಪಕಶಕ್ತಿಯನ್ನು ಕುಗ್ಗಿಸಲು ನಮ್ಮ ಹಿರಿಯರು ಕಂಡುಹಿಡಿದಿರುವ ಉಪಾಯ.

ಪುಸ್ತಕಾಲಯ—ಯಾರೂ ಮುಟ್ಟದಂತೆ ಪುಸ್ತಕಗಳನ್ನು ಬಚ್ಚಿಡುವ ಸಾರ್ವಜನಿಕ ಸಂಸ್ಥೆ.

ಪೂಜ್ಯ—ಉಚ್ಚಸ್ಥಾನವೆ ಪೂಜಂ; ಏಕೆಂದರೆ, ಎಲ್ಲರೂ ನೀಚಸ್ಥಾನಕ್ಕಿಳಿದು ಬಿಟ್ಟಿದ್ದಾರೆ.

ಪೂಜಾಗೃಹ—ಕಂಚುಗಾರನ ಬಿಡಾರ.

ಪೂಟ್‌ಲಾಯರು—ಗ್ರಾಮವೃಕ್ಷದ ಮೇಲಿನ ಬಂದಿಳಿಕೆ.

ಪೂರ್ಣವಿರಾಮ—ಸಾವು, ಅಥವಾ ರಿಟೈರು.

ಪೂರ್ವಿ—ಆಯ್ಯೋ ನಿನಗೆ ಈ ಗತಿಯಾಯಿತೆ, ಎಂದು ನಾವು ನಮ್ಮನ್ನೇ ಬೈಯ್ಯುವ ರೀತಿ.

ಪೂರ್ವಶಿ—ಬಡತನಕ್ಕೆ ಬಿದ್ದ ಬೆಲೆವೆಣ್ಣು.

ಪೃಷ್ಠಮಾಂಸಾದನ—ಚಾಡಿಕೋರ.

ಪೆಚ್ಚು—'ಕೆಚ್ಚೇರಿದ ವೈರಾಗ್ಯದ ಪೆಚ್ಚಿಂ', ಎಂಬುದನ್ನು ನೋಡಿ.

ಪೆಟ್ಟಿಗೆ—ಪೆಟ್ಟಿಗೆ ಪೆಟ್ಟಾದರೂ (ಕತ್ತಲೆಯಲ್ಲಿ ಪೆಟ್ಟಿಗೆ ಮೇಲೆ ಎಡವಿ ಬಿದ್ದರೂ) ಸಿಟ್ಟು ಬಿಡಲಿಲ್ಲ (ಗಾದೆ).

ಪೆಟ್ಟು—ಮಿಕ್ಕ ಪೆಟ್ಟಿಗಿಂತ, ನಕ್ಕ ಪೆಟ್ಟು ಹೆಚ್ಚು (ಗಾದೆ) ಉದಾಹರಣೆ: ಕೌರವ-ಪಾಂಡವ ಯುದ್ಧದ ಮೂಲ; ಬೆನ್ನು ಇದನ್ನೇ ತಿನ್ನುತ್ತದೆ. ಸಾವಿರಪೆಟ್ಟು ತಿಂದರೇನೆ ನಾವು ಒಂದು ವಿಗ್ರಹ ಮಾಡಲು ಸಾಧ್ಯ.

ಪೆನ್—ಕತ್ತಿಗಿಂತ ಬಲವಾದ ಪೆನ್ನುಗಳನ್ನು ಹಲವರು ಇಟ್ಟುಕೊಂಡಿರುತ್ತಾರೆ; ಅಷ್ಟು ದಪ್ಪವಾದವು ಮಾರಾಟಕ್ಕೆ ಬಂದಿವೆ, ಈಚೆಗೆ.

ಪೆನ್‌ಷನ್—ಪೆನ್‌ಷನ್ ಇಲ್ಲದೆ ರಿಟೈರಾದಮೇಲೆ ಬಾಳಲಾರದ ಸರ್ಕಾರಿ ನೌಕರ, ಕೆಲಸಕ್ಕೆ ಬಾರದ ದಡ್ಡ.

ಪೇಟೆ—ಸಾಲಗಾರರ ಕಾಟ ಇಲ್ಲೇ ಹೆಚ್ಚು.

ಪೇಪರು—ಸುಖವಾಗಿರುವವರಿಗೆ ದುಃಖವನ್ನೂ ಚಿಂತೆಯನ್ನೂ ನೀಡುವ ಹಾಳೆ.

ಪೇರೀವಾದ್ಯ—ಹೆದರಿಕೊಂಡು ಓಡುವಾಗಿನ ಚೀರಾಟ.

ಪಂಪ್—"ಪೇಳ್ವೊಡೆ ಪಂಪನೇ ಪೇಳ್ಗುಂ".

ಪೈತ್ಯೋಪಚಾರ—ಪಿತ್ತ ತಲೆಗೇರಿದವರಿಗೆ ಮಾಡಬೇಕಾದ ಉಪಚಾರ.

ಪೈಪೋಟಿ—ಸತ್ಯವಾಗಿ ಬದುಕುವವನಿಗೆ ಪೈಪೋಟಿಯ ಭಯವೇ ಇಲ್ಲ; ಪೈಪೋಟಿಗಿಂತ, ರೂಪಾಯಿಪೋಟಿಯೇ ಹೆಚ್ಚು ಗೌರವವಂತೆ.

ಪೈಶೂನ್ಯ—ಕೈಯಲ್ಲೊಂದು ಕಾಸೂ ಇಲ್ಲ, ಎಂದು ಪಿಸುಣರು ಹೇಳುವ ಮಾತು.

ಪೈಸಾಚಿ—ಪೈಸಾ ಪೈಸಾ ಎಂದು ಕೂಗುವ ಪೈಶಾಚಿ ವೃತ್ತಿಯುಳ್ಳ.

ಪೊನ್—ಪೊನ್ನುಳ್ಳವನೆ ಕುಲೀನಂ.

ಪೊರಕೆದಾಟಿದ—ಮದುವೆ ಮಾಡಿಕೊಂಡ (ಆಂಗ್ಲ).

ಪೊಳಲಿಚ—ಈತ ಎಂದಿಗೂ ಗಮಾರನಾಗುವುದಿಲ್ಲ.

ಪೋಲೀಸರು—ಇವರು ಸ್ವರ್ಗಕ್ಕೆ ಹೋಗುವಂತೆಯೇ ಇಲ್ಲ, ಏಕೆಂದರೆ, ಅಲ್ಲಿ ಅವರ ಆವಶ್ಯಕತೆಯೇ ಇಲ್ಲ.

ಪೌಡರು— ದಿನದಿನವೂ ನಾವು ನಾವೇ ಮಾಡಿಕೊಳ್ಳುವ ಮುಖಸ್ತುತಿ.

ಪ್ಯೂನತೆ—ಆಳಾಗಿ ಬಾಳುವ ಅಭಿಲಾಷೆ.

ಪ್ರಗತಿ—ಸಿಡಿಮದ್ದು ರೇಡಿಯೋ ಪ್ರಚಾರ ಇತ್ಯಾದಿಯಿಂದ ಮಾನವಕುಲದ ಮಾನವತ್ವದ ನಾಶಕ್ಕೆ ದಾರಿಮಾಡುವುದು; ಪ್ರಗತಿಯ ದಾರಿ ಉದ್ದಕ್ಕೂ ಸ್ತ್ರೀಯರು ಪುರುಷರನ್ನು ನೂಕುತ್ತಿರುವುದನ್ನು ನೋಡಬಹುದು.

ಪ್ರಚಾರ—ಇತರರ ಮನಸ್ಸನ್ನು ಕಲಕಿ ಕದಡಿಸುವ ಬಗೆ; ಬುದ್ಧಿಯನ್ನು ದೊರ-ಕಿಸುವ ತಂತ್ರ; ಬೇಡದೆ ಇರುವ ಪದಾರ್ಥಗಳನ್ನು ಬೇಕೆನಿಸುವ ವಿಧಾನ.

ಪ್ರಜಾರಾಜ್ಯ—೯೯ ಜನ ಚುನಾಯಿತರನ್ನು ಸರ್ಕಾರ ನಡೆಯಿಸಲು ನಿಯಮಿಸಿ, ೯೮ ಜನ ಚುನಾಯಿತರನ್ನು 'ನೀವು ಅವರನ್ನು ತಡೆಯಿರಿ' ಎಂದು ಹೇಳುವ ವಿಧಾನ. ರೋಗಿಗಳೇ ವೈದ್ಯರನ್ನು ಆರಿಸುವ ಪದ್ಧತಿ; ಸಾಮಾನ್ಯರ ಸಾಮ್ರಾಜ್ಯ.

ಪ್ರಜಾಸತ್ತೆ—ಒಬ್ಬರಿಗಿಂತ ಮತ್ತೊಬ್ಬರು ಮೇಲಲ್ಲ, ಎಂಬ ತತ್ವ.

ಪ್ರಜೋತ್ಪತ್ತಿ—ಅರವತ್ತು ವರ್ಷಗಳಿಗೊಮ್ಮೆ ಮಾತ್ರ, ಎಂಬುದೇ ಹಿಂದಿನವರ ಲೆಕ್ಕ.

ಪ್ರತಿನಾಯಿಕಾ—"ಸಪತ್ನೀ ಪ್ರತಿನಾಯಿಕಾ".

ಪ್ರತಿಭಾಶಾಲಿ—ಸುಖವಾಗಿ ಬದಕಲರಿಯದೆಯೆ, ಉಳಿದದ್ದನ್ನೆಲ್ಲ ಅರಿಯು-ವವ.

ಪ್ರತಿಷ್ಠೆ— ಅಸ್ತಿಭಾರ ಶಿಲೆಗಳನ್ನು ಪ್ರತಿಷ್ಠಿಸುವುದರಿಂದ ಉಂಟಾಗುವ ಮನೋಭಾವ.

ಪ್ರತ್ಯಕ್ಷಪ್ರಮಾಣ—ಪ್ರತ್ಯಕ್ಷವೇ ಪ್ರಮಾಣವಾದರೂ ಅನೇಕರು ಸಿನಿಮಾ ತಾರೆಯರನ್ನು ಪರದೆಯ ಮೇಲೆ ಕಂಡು ಮೋಹಿಸುತ್ತಾರೆ. ಪ್ರತ್ಯಕ್ಷ ಕಂಡರೂ ಪರಾಂಬರಿಸಿ ನೋಡಬೇಕು (ಗಾದೆ).

ಪ್ರದಕ್ಷಿಣೆ—ದಕ್ಷಿಣೆಗೆ ತಕ್ಕಂತೆ; ಆದರೆ, ಆತ ದಾಕ್ಷಿಣ್ಯಪ್ರಕೃತಿಯವನಾದರೆ, ಕೊಂಚ ಹೆಚ್ಚಾಗಿ ಮಾಡುವುದೇ ಕ್ಷೇಮ.

ಪ್ರದೋಷ—ಒಬ್ಬಾಕೆಯ ಮುಖ; ಪ್ರದೋಷಂ ರಜನೀಮುಖಂ.

ಪ್ರಭಾತಪೇರಿ—ನಾಟಕದ ಕಂಪನಿಯವರು ಬೆಳಗಿನ ಜಾವವೇ ಊರು ಬಿಟ್ಟು ಓಡಿ ಹೋಗುವ ಸಂಭ್ರಮ.

ಪ್ರಶ್ನೆ—ಕೇಳೋದಕ್ಕೆ ದಡ್ಡ ಸಾಕು; ಉತ್ತರ ಹೇಳೋಕೆ ಮಾತ್ರ ಬುದ್ಧಿವಂತ ಬೇಕಾಗುತ್ತದೆ.

ಪ್ರಾರ್ಥನೆ—ಈಗಿನ ಸಭೆಗಳಲ್ಲಿ, ಭಾಷಣಕಾರರು ಭಾಷಣ ಪ್ರಾರಂಭಮಾಡುವ ಮೊದಲೇ, ಮಾಡಲೇಬೇಕಾದ ಕೆಲಸ.

ಪ್ರಾಚೀನಾಭೀತಿ—ಹಿಂದಿನ ಪದ್ಧತಿಗಳನ್ನು ಬಿಟ್ಟರೆ ಎಲ್ಲಿ ಹಿರಿಯರು ಟೀಕಿಸುತ್ತಾರೋ ಎಂಬ ಭಯ.

ಪ್ರಾಚೀನಾವೀಥಿ—ಹಳೇ ರಸ್ತೆ; ಹರಪ್ಪ, ಮೊಹಂಜೂದಾರೊ ಎಂಬ ನಗರಗಳಲ್ಲಿನ ಬೀದಿ.

ಪ್ರಾಮಾಣಿಕತೆ—ದಡ್ಡರ ಮುಖ್ಯ ಗುಣ.

ಪ್ರಾರಂಭಶಾಲೆ—ಗೃಹಸ್ಥನಿಗೆ, ಮನೆ; ಮಡದಿಯೇ ಮೇಡಂ, ಮಕ್ಕಳೇ ಸಹಪಾಠಿಗಳು.

ಪ್ರಿಯ—ಹಲವರು ಸತ್ಯ ನುಡಿಯುತ್ತಾರೆ; ಆದರೆ, ಸದ್ಯ ಉಳಿದವರೆಲ್ಲ ಪ್ರಿಯವನ್ನು ನುಡಿಯುತ್ತಿದಾರೆ.

ಪ್ರಿಯೆ—ಮಡದಿ-ತವರು ಮನೆಗೆ ಹೋಗಿರುವಾಗ.

ಪ್ರೇತಃಕಾಲ—ನಡುನಿಶಿಯನಂತರ; ಯುದ್ಧ ಮುಗಿದ ಕೂಡಲೇ. ಜನರು ಮರುಳ್ಗಳಾಗುವಾಗ.

ಪ್ರೇತಿಪದ್ಯ—ಇತಿ ಅಂದರೆ ಪ್ರೇತಿ ಎಂಬಂತೆ; ಹಕ್ಕಿ ಹಾರುತಿದೆ ನೋಡಿದಿರಾ, ಎಂಬುದಕ್ಕೆ ಬದಲಾಗಿ, ಹಕ್ಕಿ ಹಾರುತಿದೆ, ಎಂದು ಹೇಳುವುದು.

ಪ್ರೇಮ—ಹೆಣ್ಣಿಗೂ ಹೆಣ್ಣಿಗೂ ವ್ಯತ್ಯಾಸ, ಎಂಬ ನಂಬಿಕೆ ಬಂದಾಗ.

ಪ್ರೋಕ್ತಿ—ಪರವಾಗಿ ಹೇಳುವುದು.

ಪ್ರೌಢಿಮೆ—ಜಂಬ.

ಪ್ಲವಂಗ—ಅತಿ ವೇಗವಾಗಿ ಗ್ರೇಡಿಂದ ಗ್ರೇಡಿಗೆ ಹಾರುವವ.

ಪ್ಲೂರಸಿ—ಶ್ರೀಮಂತರ ಎದೆನೋವು.

## ಫ

ಫುಟ್‌ಬಾಲ್—ಇದರಲ್ಲಿ ಸೋತವರು ಗೋಳೋ ಎನ್ನುತ್ತಾರೆ.

ಫೋಟೊಗ್ರಾಫರ್—ಇವರನ್ನು ಬೈದು ಪ್ರಯೋಜನವೇ ಇಲ್ಲ.

## ಬ

ಬಕಪಾತ್ರೆ—ಹೊಟ್ಟೆ; ಬಕಾಸುರನಿಂದ ಇದಕ್ಕೆ ಈ ಹೆಸರು ಬಂದಿದೆ.

ಬಕಬಕವೈರಿ—ನಿಧಾನವಾಗಿ ಊಟ ಮಾಡೋ, ಎಂದು ಹೇಳುವವ.

ಬಕ್ರೋಕ್ತಿ—ಬ್ಯಾ ಭ್ಯಾ.

ಬಗ್ಗಿಸು—ಪಾಡೆಲೆ ತುಂಬಿ; ಬಗ್ಗಿ ಸೆಲೆ ಕೋಗಿಲೆ-ಎಂದಿರುವುದರಿಂದ, ಕೋಗಿಲೆ ಬಗ್ಗಿ ಸದ್ದು ಸಂಗೀತಕಾರರ ತಲೆಯಲ್ಲಿರಬೇಕು.

ಬಂಗಿ-ಬಂಗಿ ಪೆತ್ತುದೆ, ಕಂತುರಾಜನ ಮಂತ್ರಶಾಲೆ; ಬಂಗಿ ಸೇದಿ ಮಂಗನಾದ, ಅಂದರೆ, ಮಂಗನಂತೆ ಕಿಚಕಿಚ ಧ್ವನಿಗೈಯ್ಯುತ್ತಾನೆ.

ಬಜ್ಜೀಕರಣ—ತದುಕುವುದು.

ಬಟ್ಟತಲೆ—ಎಲ್ಲ ಕೂದಲೂ ಎಲ್ಲಿ ಉದುರಿಬಿಡುವುದೊ ಎಂಬ ಭಯದ ಪರಿಣಾಮ; ಒಬ್ಬನ ತಲೆಯನ್ನು ತುಳಿದು ತುಳಿದು ಅವನ ಕೆಳಗಿನ ನೌಕರರು ಮೇಲು ಮೇಲಿನ ಗ್ರೇಡುಗಳಿಗೆ ಹತ್ತುತ್ತಿದ್ದರೆ, ಆತನ ತಲೆಗೆ ಇದೇ ಗತಿ.

ಬಡಖಾನೆ—ಬಡವರ ಪಡಖಾನೆ; ಶ್ರೀಮಂತರ ಪಡಖಾನೆಗಳಿಗೆ ಬೇರೆ ಬೇರೆ ಹೆಸರುಂಟು.

ಬಡಗರ—ಬಡವರ ಸಡಗರ.

ಬಡತನ—ಪಕ್ಕದ ಮನೆಯವರು ಹೊಸದಾಗಿ ಏನನ್ನಾದರೂ ಕೊಂಡು ತಂದಾಗ, ನಮ್ಮ ಆರ್ಥಿಕ ಸ್ಥಿತಿಯ ವಿಷಯವಾಗಿ ನಮಗಾಗುವ ಅರಿವು. ಬಡತನವು ಬರಲದೇ ಭಗವತ್ ಭಜನೆಯೋಗ.

ಬಡಪಾಯಿ—ಅವುಳಿ-ಜವುಳಿಯ ತಂದೆ; ಕೊಸಿಗೊಂದು ಕೊಸರಿಗಿನ್ನೊಂದು.

ಬಡಭರತ—ಜಡಭರತನ ಮತ್ತೊಂದು ಹೆಸರು.

ಬಡವಾಗ್ನಿ—ಕ್ರಾಂತಿಕಾರಕ ಬೆಂಕಿ.

ಬಂಡವಾಳ—ಮನಿ ಕೂಡಿದರೆ ಹಳ್ಳ, ಎಂಬ ತತ್ವವನ್ನನುಸರಿಸಿ ಕೂಡಿಸಿದ್ದು.

ಬಂಡವಾಳಗಾರ—ಮಿಕ್ಕೆಲ್ಲ ಹಣವಂತರೂ.

ಬಡಾ ಈ—ಈಶ್ವರ ಎಂದೆನಿಸಿಕೊಂಡಿರುವವರು ಬಡಾ ಈ ಹಾಕಿಕೊಳ್ಳುತ್ತಾರೆ.

ಬಡಾಯಿ—ನಮ್ಮ ಗೆಳೆಯರು ಅವರ ಸಾಹಸಗಳನ್ನು ನಮ್ಮೆದುರು ವಿವರಿಸುವ ಧಾಟಿ.

ಬಡಾಯಿಚೋರ—ಒಬ್ಬರ ಬಡಾಯಿಯನ್ನು ಕದ್ದು ತನ್ನದೆಂದು ಹೇಳಿಕೊಂಡು ಕೊಚ್ಚುವವ.

ಬಡಿವಾರ—ಬಡಿದು ಸಂಪಾದಿಸಿದ್ದು.

ಬಡ್ತಿ—ನಮ್ಮ ಸಹೋದ್ಯೋಗಿಗಳು ಇವನ್ನು ಸಂಪಾದಿಸಿ ನಮಗೆ ಅನ್ಯಾಯ ಮಾಡುವರು; ಸೇವಾಫಲ; ಜಾತಕತನಕ್ಕಿಂತಲೂ ಘಾತುಕತನವೇ ಇದರ ಆರ್ಜನೆಗೆ ಆಯುಧ.

ಬಣ್ಣ—ಪರಂಗಿ ಹೆಂಗಸರು ಇದನ್ನು ಹಚ್ಚಿ, ಆಯುಸ್ಸನ್ನು ಹೆಚ್ಚಿಸಿಕೊಳ್ಳುವರಂತೆ.

ಬಣ್ಣದಕೋಲು—ಬೆಕ್ಕನ್ನು ಬಡಿಯುವುದಕ್ಕೆ ಬಣ್ಣದ ಕೋಲು ಬೇಕೆ, ಎಂಬ ಸಮಸ್ಯೆಯನ್ನು ಇಲಿಗಳು ಇನ್ನೂ ಇತ್ಯರ್ಥ ಮಾಡಿಲ್ಲವಂತೆ.

ಬಣ್ಣನೆ—ಬಣ್ಣಿಸಿ ಬಣ್ಣಿಸಿ ಕರೆಕರೆದು ಕರಕರಿಸದಿರ್, ತಲೆ ನೋವುದು (ಮುದ್ದಣ).

ಬದಲು—ಮಿಕ್ಕೆಲ್ಲ ಬದಲಾದರೂ, ನಮ್ಮ ವಿಷಯದಲ್ಲಿ ನಮಗಿರುವ ಮೆಚ್ಚುಗೆಯ ಭಾವನೆ ಮಾತ್ರ ಬದಲಾಗುವುದಿಲ್ಲ.

ಬದುಕು—ಶ್ಮಶಾನಯಾತ್ರೆ; ಮೊದಲರ್ಥ, ತಂದೆ-ತಾಯಿಯರ ಹಿಂಸೆ; ನಂತರದ ಅರ್ಥ, ಆದಕ್ಕೆ ಮಕ್ಕಳುಮರಿಗಳ ಮೇಲೆ ಸೇಡು ತೀರಿಸಿಕೊಳ್ಳುವ ಅವಕಾಶ. ಬದಕುವವನು ಬದುಕ್ಯಾನೆ ? (ಗಾದೆ).

ಬಂದರು—ಸಮುದ್ರದಮೇಲೆ ಹೋಗಿದ್ದವರು ಬಂದರು ಎನಿಸುವ ಜಾಗ.

ಬಧಿರ—ಕೇಳಲು ಇಚ್ಛೆಯಿಲ್ಲದವರಷ್ಟು ಬಧಿರರು ಬೇರಾರೂ ಇಲ್ಲ.

ಬಂಧು—ಬಂದುಂಡು ಹೋಗದವ.

ಬರವಣಿಗೆ—ಬರವಣಿಗೆಯಿಂದ ವರಮಾನ ಹೆಚ್ಚಬೇಕಾದರೆ, ಬರೆಯುವುದು ಮಾವನಿಗಿರಬೇಕು.

ಬರೆವವ—ಬರೆವವರ ಕೂಡ ಹಗೆ ಬೇಡ (ಸರ್ವಜ್ಞ).

ಬಲ್ಬು—ಮಿಂಚಿನ ಬುಡ್ಡಿ.

ಬಲ್ಲಪ್ಪ—ಅಲ್ಲಪ್ಪನೂರಲ್ಲಿ ಬಲ್ಲಪ್ಪ ನಲ್ಲಪ್ಪ.

ಬಲವಂತ—ಹಣವಂತ.

ಬಲಿಪೀಠ—ಪರೀಕ್ಷೆ ನಡೆಯುವ ಜಾಗ.

ಬಸ್—ಕೈತೋರಿಸಿ ಸೀಟಿಲ್ಲ ಎನಿಸಿಕೊಳ್ಳುವುದು, ಇದರಿಂದಲೇ.

ಬಸವ—ಬಾಲದ ಮುಂದೆ ಹೋಗುವ ಪ್ರಾಣಿ; ಕಟುಕರ ಅಂಗಡೀಲಿ ಇದರ ಪುರಾಣ ಹೇಳುವವನು ದಡ್ಡ.

ಬಹಿರೂಪ—ಆಕಾರಕ್ಕೆ ತಕ್ಕ ಬಹಿರೂಪ, ಬಹಿರೂಪಕ್ಕೆ ತಕ್ಕಸಾಲ.

ಬಹುಧಾನ್ಯ—ಒಬ್ಬನ ಆಯುಷ್ಯದಲ್ಲಿ ಒಮ್ಮೆ ಅವನು ಇದನ್ನು ಕಂಡಾನು.

ಬಹುಪತ್ನೀ ಪದ್ಧತಿ—ಬಿದ್ದ ಹಳ್ಳಕ್ಕೆ ಮತ್ತೆ ಮತ್ತೆ ಬೀಳುವ ಸಂಪ್ರದಾಯ.

ಬಹುವಚನ—ಕೂಸು ಎಂಬುದರ ಬಹುವಚನ ಅವುಳಿ-ಜವುಳಿ; ಏಟು ಎಂಬುದರ ಬಹುವಚನ ಜಗಳ.

ಬಹುಸಂಖ್ಯಾತರು—ದಡ್ಡರು.

ಬಳ್ಳಿಗುರುಡರು—ರಾಜಕೀಯ ನಾಮುಕರು.

ಬಳೆ—ಗಂಡಸರನೇಕರಿಗೆ ಪೋಲಿಸಿನವರು ತೊಡಿಸುವ ಆಭರಣ; ಬಳೆಗಳು ನಾನಾರೀತಿಯವು; ಕಾಂಬಳೆ, ಉಂಬಳೆ, ತಿಂಬಳೆ, ಇನಿತೆಂಬಳೆ, ಎನಿಶಿಂಬಳೆ ಇತ್ಯಾದಿ.

ಬಹುವ್ರೀಹಿ—ತುಂಬ ಅಕ್ಕಿ ದಾಸ್ತಾನಿರಿಸಿರುವವ;............ಕಾಳಸಂತೆಯನ್ನು ನೋಡಿ.

ಬಾಕ್ಯಾರ್ಥ—ನಮಗೆ ಗೋಚರವಾಗದ ಸೂಕ್ಷ್ಮ.

ಬಾಕ್ಯಾಲಂಕಾರ—ಇದನ್ನು ಮುಗಿಸುವುದಕ್ಕೆ ಇನ್ನೂ ಕಾಲಾವಕಾಶ ಬೇಕಾಗುವುದು.

ಬಾಂಬವತಿ—ಬಾಂಬಾಸ್ತ್ರಧಾರಣೆಯಾದ ರಾಜ್ಯಲಕ್ಷ್ಮಿ.

ಬಾಂಬವಂತರು—ಅಮೇರಿಕಾ ಹಾಗೂ ರಷ್ಯ.

ಬಾಂಬು—ಸಿಡಿಲಪೊಟ್ಟಣ ಕಟ್ಟಿ ಶಾಖವ ಕೊಟ್ಟರೆ,........ಬಾಂಬು.

ಬಾಜಾರ್—ನಮಗೆ ಆಗದವರನ್ನು ಅಸೂಯೆಪಡಿಸಲು, ನಮಗೆ ಬೇಡದ ಪದಾರ್ಥಗಳನ್ನು ನಮ್ಮಲ್ಲಿ ಇಲ್ಲದ ಕಾಸು ತೆತ್ತು, ನಾವು ಕೊಂಡು ತರುವ ಜಾಗ.

ಬಾಜಿ—'ದೈವತಂ ಹೇಷತೆ ಬಾಜೀ'; ಸಾಕಷ್ಟು ಹಣ ಇರುವವರೂ, ಬೇ-ಕಷ್ಟು ಹಣ ಇಲ್ಲದವರೂ ಬಾಜಿ ಕಟ್ಟುತ್ತಾರೆ.

ಬಾಣ—ಜಗತ್ತನ್ನೆಲ್ಲ ಎಂಜಲು ಮಾಡಿದ ಕವಿ.

ಬಾಣಾಕ್ಷ—ಕ್ರೂರವಾದ ನೋಟದವ.

ಬಾತ್ಮೀದಾರ— ಈತನಿಗೆ ಮೈಯೆಲ್ಲ ಕಿವಿ; ಸ್ಥಳೀಯ ಮಹನೀಯರುಗಳ ಪ್ರಚಾರಕ.

ಬಾತು— ಕ್ರಿಕೆಟ್‌ನಲ್ಲಿ ಅದೃಷ್ಟವಂತರಿಗೆ ಲಭಿಸುವ ಬಿರುದು.

ಬಾದರಾಯನಸಂಬಂಧ—ರಾಮನಿಗೆ ರಾಜ್ಯ ಬಂದರೆ, ಬಾದರಾಯನಿಗೂ ಯಃಕಶ್ಚಿತ್ (ಗಾದೆ).

ಬಾಯಿ—ಇದಕ್ಕೆ ಕಡಾಣಿ ಹಾಕಿದರೆ ಒಳ್ಳೆಯದು; ಹಲವರು ಬಾಯಿ ಮುಚ್ಚಿದರೆ ನಾವು ಕಿವಿ ಬಿಚ್ಚಬಹುದು; ಸ್ತ್ರೀಯರನ್ನು ಗೌರವದಿಂದ ಸಂಬೋಧಿಸುವ ರೀತಿ, ಅಗೌರವದಿಂದಲ್ಲವೆಂಬುದನ್ನು ಗಮನಿಸಿ. ಬಾಯಿ ಬಿಟ್ಟರೆ ಮಣ್ಣು ತುಂಬುವುದೆ ? (ಗಾದೆ).

ಬಾರ್— ದ್ರವದ್ರವ್ಯ ನಿರ್ಮುಕ್ತಿಯಾಗುವ ಸ್ಥಳ; ಹೆಂಡದಂಗಡಿ.

ಬಾರ್‌ಸಿಪಾಯಿ—ಬಾರ್ ಎಂಬುದನ್ನು ನೋಡಿ.

ಬಾರಾಟ—ಕ್ರಿಕೇಟ್‌ನಲ್ಲಿ, ಗಡಿಬಾರು ಬಾನ್ಬಾರು ಮುಂತಾಗಿ ಬಾರಿಬಾರಿಗೂ ಬಾರಿಸುವುದು.

ಬಾಲ–ಬಾಲ ಇರುವುದೆಲ್ಲ ಕುದುರೆ, ಡಿಗ್ರಿ ಇರುವವರಿಗೆಲ್ಲ ಅಗ್ರಪೂಜೆ(ಗಾದೆ).

ಬಾಲಕಾಂಡ— ನರನಿಗೆ ಬಾಲವಿದ್ದಾಗ–ಬಾಲಕಾಂಡ.

ಬಾಲಾಢ್ಯ—ಅನೇಕ ಡಿಗ್ರಿಗಳನ್ನು ತಗುಲಿಸಿಕೊಂಡಿರುವವ.

ಬಾಹುಯುದ್ಧ—ಪ್ರಾಣಾಂತಂ ಬಾಹುಯುದ್ಧಕಂ, ಕಟ್ಟಳೆ ವ್ಯವಹಾರಗಳಲ್ಲಿ ಜಿದ್ದು.

ಬಾಳೆಸಿಪ್ಪೆ—ಟಾಂಗ್ ಕೊಡಲು ಕಾದಿರುವ ಪಿತೂರಿಗ.

ಬಾಳೆಹಣ್ಣು—ಗೊನೆ ಬಿಟ್ಟು ಹೊರಗೆ ಬಂದ ತಕ್ಷಣ, ಸಿಪ್ಪೆ ಸುಲಿದು, ತಿಂದು ಹಾಕಿ ಬಿಡುತ್ತಾರೆ, ಜನ.

ಬಿಂಕದವ—ಕನ್ನಡಿ ನೋಡಿದ ಮೇಲೂ, ನಾಲ್ಕೂ ಜನರೆದುರು ತಲೆ ಎತ್ತಿ ನಡೆಯುವವ.

ಬಿಕ್ಕಲು—ಮದವೆಯಾದ ಗಂಡಸಿನ ಮನೆ-ಮಾತು.

ಬಿದ್ದ—ಫ್ರೋಟೋದಲ್ಲಿ ಎಂಥವರೂ ಬಿದ್ದು ಬಿಡುತ್ತಾರೆ.

ಬಿದ್ದಾಂಜಲಿ—ಅಕಸ್ಮಾತ್ ನಡೆದುಹೋದ ಅಂಜಲಿ.

ಬಿದಿರು—ಬಿದಿರೆ ಅಂದಣವಕ್ಕು, ಬಿದಿರೆ ಸತ್ತಿಗೆಯುಕ್ಕು, ಬಿದಿರಿಂದ ಸಕಲ ಪದವಕ್ಕು (ಸರ್ವಜ್ಞ) ತೊಟ್ಟಿಲಿಂದ ಚಟ್ಟದ ವರೆಗೂ ಬಿದಿರೇ ಆಶ್ರಯ.

ಬಿರದು—ಚಿಂತೆಗೂ ಚಿತೆಗೂ ಇರುವ ವ್ಯತ್ಯಾಸ.

ಬಿರುದು—ಉತ್ತಮರಿಗೆ ಹೊರೆ, ಮಧ್ಯಮರಿಗೆ ಮೆರೆ, ಅಧಮರಿಗೆ ಕರಕರ; ಬಿರುದರ್ಗೆ ಬಿರುದರ್ ಸೆಣಸುವರ್.

ಬಿಲ್ಪತ್ರ—ಬಿಲ್ ಒಳಗಿಟ್ಟು ಕಳುಹಿಸುವ ಪತ್ರ; ಬಡವರನ್ನು ಕಂಡರೆ ಇದು ಬುಸ್ಸೆನ್ನುತ್ತದೆ.

ಬಿಲ್ಪತ್ರೆ—ಬಡದೇವರನ್ನು ಸಹಿಸದ ಶ್ರೀಮಂತ ಸೊಪ್ಪು.

ಬಿಲ್ಹಣ—ಬಿಲ್ಪತ್ರದಲ್ಲಿ ನಮೂದಾಗಿರುವುದು.

ಬಿಲ್ಲಾಳ—ಬಿಲ್ ಕಲೆಕ್ಟರ್.

ಬಿಲೋತ್ತಮೆ—ಹೆಗ್ಗಣ ಸ್ತ್ರೀ.

ಬಿಸಿಲುಗುದುರೆ—ನಮ್ಮೆಲ್ಲರ ವಾಹನ.

ಬಿಳಿ—ಬಿಳಿ ಬಣ್ಣದ ಮೇಲಿನ ಮೋಹ ನಮ್ಮಲ್ಲೂ ಇರುವುದರಿಂದ ನಾವು ಅಮೇರಿಕನ್ನರನ್ನು ಮಾತ್ರ ನೀವು ಕಪ್ಪು ಬಣ್ಣದವರನ್ನು ದೂಷಿಸುತ್ತೀರಿ, ಎಂದು ದೂರಿ ಪ್ರಯೋಜನವಿಲ್ಲ.

ಬೀಗ—ಬೀಗರ ಬಾಯಿಗೆ ಬೀಗವೇ ನಾಸ್ತಿ (ಗಾದೆ).

ಬೀಜಗಣಿತ—ವ್ಯವಸಾಯ ಸಂಶೋಧನಾಲಯದಲ್ಲಿ ನಡೆಯುವ ಕೆಲಸ.

ಬುಕ್ಕ—ಗ್ರಂಥಕೀಟ; ಪುಸ್ತಕಗಳನ್ನೆಲ್ಲ ಮಸ್ತಕಕ್ಕೇರಿಸುವವ.

ಬುಕ್ಕರಾಯ—ಮೆಚ್ಚಿದವರಿಗೆಲ್ಲ ಬೆಕ್ಕಿನ ಮರಿಯನ್ನು ದಯಪಾಲಿಸುತ್ತಿದ್ದ ಮಹಾರಾಜ.

ಬುಡ—ಕೊಡಲಿ ಬೀಳುವ ಸ್ಥಳ.

ಬುಡಾಯಿಸು—ಬುಡಸಹಿತ ಬೇರೊಂದೆಡೆ ನಟ್ಟು ಬೆಳೆಸು.

ಬುದ್ಧಿ—ತರುಣರಿಗೆ ಇದು ಇದೆ ಎಂದು ಹಿರಿಯರು ಒಪ್ಪುವುದಿಲ್ಲ.

ಬುದ್ಧಿವಂತ—ಎಣ್ಣೆಯನ್ನು ಡಬ್ಬದಿಂದ ಡಬ್ಬಕ್ಕೆ ಹುಯ್ಯಲು ಸಹಾಯಕವಾದ ಒಂದು ಉಪಕರಣಕ್ಕೆ ಈ ಹೆಸರು; ಅದನ್ನೇ ಬುದ್ಧಿವಂತ ಎಂದು ಕರೆದವರ ಬುದ್ಧಿಗೆ ಏನು ಹೇಳಲಿ; ಬಲ ಬಂದವನೇ ಬುದ್ಧಿವಂತನು.

ಬುರುಡೆ—ಜೋಗಿ ಜೋಗಿ ಗುದ್ದಾಡ್ಯಾಡಿ ಬುರುಡೆ ಒಡೆಯಿತು (ಗಾದೆ) ವೈರಾಗ್ಯದ ಮಹಿಮೆ ಅಷ್ಟು; ನಟೋ ಬುರುಡ ಏವ ಚ (ಯಮ).

ಬುಲ್‌ಬುಲ್‌ತರಂಗ್—ಒಂದು ಹಿಂಸಾವಿಧಾನ.

ಬೂಟಕತನ—ಬೂಟಕತನ ಮಾಡಿದರೆ, ಕಾಲು ಕಚ್ಚುವುದು ಬಿಟ್ಟೀತೆ (ಗಾದೆ); ಬೂಟ್ಸ್ ಧರಿಸುವಿಕೆ.

ಬೂತಚೇಷ್ಟೆ—ಪೋಲಿಂಗ್ ಬೂತು ಸುತ್ತ ಹುರಿಯಾಳುಗಳು ಮಾಡುವಚೇಷ್ಟೆ.

ಬೂತಬಲಿ—ಚುನಾವಣೆ ಕಾಲದಲ್ಲಿ ಭೂತ್‌ಗಳಲ್ಲಿ ನಡೆಯುವ ಪೋಲಿಂಗ್‌ನಲ್ಲಿ ಯಾದವ.

ಬೂತುಗ—ಮಾತುಗಂ ಬೂತುಗಂ:-ಮಾತು ಆಡಬಲ್ಲವ ಬೂತನ್ನೂ ಆಳಬಲ್ಲ.

ಬೂದಿ—ಬೂದಿ ಮುಚ್ಚಿದ ಭಂಡನನ್ನು ನೋಡಿ; ಬೂದಿ ಹಚ್ಚಿಕೊಂಡರೆ ಓದಾಳಿಯಾದಾನೇ, ಎಂದು ಗಾದೆಗಾರ ಪೌಡರ್ ಹಚ್ಚಿಕೊಳ್ಳುವ ತರುಣರನ್ನು ಮೂದಲಿಸುತ್ತಾನೆ.

ಬೂದೀನಾಯಾಸನ—ವೈರಾಗ್ಯದ ಪ್ರಾರಂಭಕ್ಕೆ ಇದು ಒಳ್ಳೆ ಆಸನ.

ಬೃಹದಾರಣ್ಯಕ—ವನಮಹೋತ್ಸವದಿಂದ ಕಾಡನ್ನು ಬೆಳೆಸಲೆಳಿಸುವವ.

ಬೃಹದ್ಕುಕ್ಷಿ—ಎಷ್ಟು ತಿಂದರೂ ತೇಗದವ, ಲಂಚಿಗ.

ಬೃಹನ್ನಡೆ—ದೊಡ್ಡವರ ನಡತೆ.

ಬೆಕ್ಕು—ನಿರಾತಂಕವಾಗಿ, ಕಂಡವರ ಗಂಟು ಕರಗಿಸುವವ; ಬಸ್ಸಿಗೆ ಅಡ್ಡವಾಗಿ ಬೆಕ್ಕು ದಾಟಿದರೆ, ಶುಭ ಸೂಚನೆ,........ಬೆಕ್ಕಿಗೆ.

ಬೆಂಕಿಕಡ್ಡಿ—ಸಾಹಿತಿ ಬರೆದ್ದ ಕಥೆಯ ಕೊನೆಯ ಅಧ್ಯಾಯ.

ಬೆಚ್ಚರಿಕೆ—ಹೆದರಿದವನ ಮೇಲೆ ಹಾವನ್ನೆಸೆದಾಗ.

ಬೆಟ್ಟ—ಬೋರಲು ಇರಿಸಿದ ಹಳ್ಳ; ಬೆಟ್ಟ ಬಿಸಿಲಲ್ಲಿ ಬೇಯುತ್ತದಲ್ಲಾ, ಎಂದು ಸೆಟ್ಟಿ (ಒಬ್ಬ ಅಜ್ಞಾತ ಕವಿ) ಅತ್ತನಂತೆ.

ಬೆಟ್ಟದಿಲಿ—ಔರಂಗಜೇಬನ ಸಿಂಹಾಸನವನ್ನು ಕೊರೆದು ಕೆಡವಿದ ಪ್ರಾಣಿ.

ಬೆಡ್ಡಿಂಗ್—ಬಗ್ಗಿದವನ ಮೇಲೆ ಬೆಡ್ಡಿಂಗಿಟ್ಟರು (ಗಾದೆ). ಅಕ್ಕಿ ಮುಂತಾದ ಕಂಟ್ರೋಲ್ ಪದಾರ್ಥಗಳನ್ನು ರೈಲಲ್ಲಿ ಸಾಗಿಸಲು ಒದಗುವ ಒಂದು ಸಾಧನ.

ಬೆಂಡು—ಬಗ್ಗು (ಆಂಗ್ಲ) ; ಆನೆ ಬೆಂಡಾದರೆ ಕೊಟ್ಟಿಗೆ ಹೊಕ್ಕೀತೆ ? (ಕನ್ನಡ ಗಾದೆ).

ಬೆನಕ—ಕಂಟಕಕೆ ಕಡು ಡೈನಮೈಟು (ಪು. ಸರಸ್ವತಿ).

ಬೆನ್ನು—ಬೆನ್ನ ಹಿಂದೆ ಮಾತನಾಡಿದರೆ, ನಮಗೆ ತುಂಬ ರೇಗುತ್ತದೆ (ಸಿನಿಮಾ ಮಂದಿರಗಳಲ್ಲಿ); ಬೆನ್ನ ಹಿಂದೆ ಬಂದವನು ಬೆನ್ನ ಮೇಲೆ ಗುದ್ದೋದೆ ನ್ಯಾಯ, ಅಣ್ಣತಮ್ಮಂದಿರ ವ್ಯಾಜ್ಯದ ಮೂಲವೇ ಅದು; ಬೆನ್ನು ತಟ್ಟಿದರೆ ಎದೆ ಉಬ್ಬುತ್ತೆ; ಹಲವರಿಗೆ ಚತುರ್ಭುಜ ಬೆಳೆಯುವುದೂ ಉಂಟು.

ಬೆನ್ನುಫಣಿ—ಹೆಡೆ ಎತ್ತಿ ನಿಂತಿರುವ ಮೇಲಧಿಕಾರಿಯ ಕಣ್ಣು.

ಬೆನ್ನುಮೂಳೆ—ಇದರ ಮೇಲುಭಾಗದಲ್ಲಿ ತಲೆ ಕೂತಿರುತ್ತದೆ, ಕೆಳಭಾಗದಲ್ಲಿ ನಾವು ಕೂತಿರುತ್ತೇವೆ.

ಬೆನ್ನೀರ್—ಇದನ್ನು ಬೇರಿಗೆ ಹಾಕಬಾರದು, ಬೆನ್ನಿಗೆ ಹಾಕಬಹುದು.

ಬೆಂಬಾಲಕರು—ಹಿಂಬಾಲಕರಂತೆ ಇವರೂ ಬೆನ್ನು ಕಾಯುವರು.

ಬೆರಳು—ಕೆಲವರು ನಾವು ಬೆರಳು ತೋರಿಸಿದರೆ, ಉಂಗುರ ಹಾಕಿ ಬಿಡುತ್ತಾರೆ.

ಬೆಲ್ಲ—ಎಲ್ಲ ದೋಷವೂ ಬೆಲ್ಲದಲ್ಲಿ ಪರಿಹಾರ (ಗಾದೆ) ಬೆಲ್ಲಂ, ಎಂದರೆ ಲ್ಯಾಟಿನ್‌ನಲ್ಲಿ ಯುದ್ಧ ; ಬೆಲ್ಲದೊಳು ಸವಿಯೋ ಸವಿಯೊಳು ಬೆಲ್ಲವೊ, ಬೆಲ್ಲ ಸವಿಗಳೆರಡು ನಾಲಗೆಯೊಳಗೊ, ಎಂದು ತರ್ಕಿಸಿದರೆ, ಬೆಲ್ಲದ ರುಚಿಯೇ ಹಾಳು.

ಬೆವರು—ಯಾವ ಕೆಲಸದಲ್ಲಿ ಗೆಲ್ಲಬೇಕಾದರೂ ಶೇಕಡ ೯೯ ಬೆವರು, ಶೇಕಡ ೧ ಮೆದುಳು, ಉಳಿದದ್ದು ದೇವರು.

ಬೆಳಗು—ಅಳಿಯನ ಕುರುಡನ್ನು ಬಹಿರಂಗಪಡಿಸುವ ಪಿತೂರಿ.

ಬೆಳ್ಳುಳ್ಳಿ—ಉಳಿದವರು ಮೊಳ ಬಿಟ್ಟು ಮಾತನಾಡಲು, ಇದೇ ಉಪಾಯ.

ಬೇಕೋಪ—ಅಪಮಾನವನ್ನೆಲ್ಲ ನುಂಗುವ ದಡ್ಡ.

ಬೇತಾಳ—ರಾಗಜ್ಞಾನವಿದ್ದರೂ ಕೆಲವು ಸಂಗೀತಗಾರರಿಗೆ ತಾಳಜ್ಞಾನವೇ ಇರುವುದಿಲ್ಲ.

ಬೇತಾಳಗೀತಂ—ತಾಳವಿಲ್ಲದ ಹಾಡು.

ಬೇರು—ಲಂಚಕೊಡಬೇಕಾದ ವ್ಯಕ್ತಿ; ಬೇರು ನೀರುಂಡಾಗ ತಣಿಯುವೆ ಭೂರುಹದ ಶಾಖೋಪಶಾಖೆಗಳು ?

ಬೇರೋಜುಗಾರ—ಕೆಲಸ ಇಲ್ಲದವ.

ಬೇಲಿ—ಆಗಾಗ ಎದ್ದು ಹೊಲ ಮೇಯುವ ಅಭ್ಯಾಸ, ಇದಕ್ಕೆ; ದಕ್ಷಿಣ ಅಮೇರಿಕಾರಾಷ್ಟ್ರಗಳಲ್ಲಿ ಈಗಲೂ ಸೈನ್ಯ ದಂಗೆ ಎದ್ದು ಅಧಿಕಾರ ಸೂತ್ರವನ್ನು ವಹಿಸುತ್ತಿರುವುದನ್ನು ಗಮನಿಸಿ.

ಬೇಸಿಗೆ—ಈರೆಂಟಾಗೆ ಪಲಂ ಅಕ್ಕು, ಅವು ಇಪ್ಪತ್ತೆನಲ್ಕೆ ಬೇಸಗೆಯಕ್ಕು; ಅಂದರೆ, ಉಷ್ಣಾಂಶವನ್ನು ಹಿಂದಿನ ಕಾಲದಲ್ಲೂ ಅಳತೆಮಾಡಿ ಬೇಸಿಗೆಯ ತೀಕ್ಷ್ಣತೆಯನ್ನು ಇತ್ಯರ್ಥಪಡಿಸುತ್ತಿದ್ದರೆಂಬುದು ಸ್ಪಷ್ಟವಾದ ಹಾಗಾಯಿತು.

ಬೇಳೆ— ಒಬ್ಬರ ಬೇಳೆ ಮತ್ತೊಬ್ಬರ ಹತ್ತಿರ ಬೇಯದು.

ಬೈಗಳು—ತರ್ಕದಲ್ಲಿ ಸೋತಾಗ, ಇವೇ ನಮಗೆ ಆಧಾರ; ಹೇಡಿಗಳ ಅಸ್ತ್ರ.

ಬೈಯಾರಿ—ಬೈಯುವ ಒಯ್ಯಾರಿ.

ಬೊಗುಳು—ರಾಗದ ಪೀಠಿಕೆ; ಬೊಗುಳಿ ಬೊಗುಳಿ....ರಾಗ (ಗಾದೆ).

ಬೊಗುಳುಭಟ್ಟ—ಸದಾ ತೆಗಳಿ ಟೀಕಿಸುವ ವ್ಯಕ್ತಿ.

ಬೊಗುಳುವ ನಾಯಿ—ಕಚ್ಚುವುದಿಲ್ಲ....ಬೊಗುಳುವಾಗ; ಬೊಗುಳುವ ನಾಯಿಗೆ ಭಂಗಾರದ ಸರಪಣಿ.

ಬೊಚ್ಚು—ಸೊಗಯಿಸುವೆ ಪಲ್ಲಿಲಿಬಾಯಿ ? ಹಲ್ಲುಕಟ್ಟಿಸಿಕೊಳ್ಳಲೇಬೇಕು, ಎಂದು ದಂತವೈದ್ಯರು ಹೇಳುವರು.

ಬೊಜ್ಜು—ಇದನ್ನು ಕಂಡಲ್ಲಿ ಕರಗಿಸೋಣವೆನಿಸುತ್ತದೆ.

ಬೊಬ್ಬೆ—ಅಸಹಾಯಶೂರರ ಆರ್ತನಾದ.

ಬೊಂಬುಲೆನ್ಸ್—ಅಂಬುಲೆನ್ಸ್ ಗಾಡಿ ಮಗುಚಿಕೊಂಡಾಗ.

ಬೊಂಬೂಸವಾರಿ—ಎಲ್ಲರೂ ಮಾಡಲೇಬೇಕಾದ್ದು.

ಬೋಂಡ—ಇದನ್ನು ಕರಿಯುವ ಎಣ್ಣೆ ಹೊಲಸಾಗಿರುವುದರಿಂದ ಇದರ ಗಾತ್ರ ಚಿಕ್ಕದಾಗಿದ್ದಷ್ಟು ಉತ್ತಮ.

ಬೋನಸ್—ಹಿಡಿದ ಸಂಬಳವನ್ನು ಹಿಂದಕ್ಕೆ ಕೊಡುವ ನೀತಿ.

ಬೋಳೈಸು—ಮೇಲೆ ಮೇಲದು ಮೆಲ್ಲಮೆಲ್ಲನೆ ಕೀಳತೊಡಗುವುದು; ಸಮ್ಮಾಧಾನಕ್ಕೆ ತರುವುದು: ಕೋರಿಯಾ ಆಕ್ರಮಣದಂತೆ ನಾಡನ್ನೆಲ್ಲ ಬಾಂಬು ಮಾಡಿ ನಾಶಮಾಡಿ ನಂತರ ಶಾಂತಿ ನೆಲಸುವುದು.

ಬ್ಯಾಂಕು—ಹಣವಂತನಿಗೆ ಹಣ ಒದಗಿಸುವ ಸಂಸ್ಥೆ; ಬಿಸಿಲಿದ್ದಾಗ ಕೊಡೆ ಸಾಲಕೊಟ್ಟು, ಮಳೆ ಬಂದಕೂಡಲೇ ಹಿಂದಕ್ಕೆ ಕೇಳುವ ಸಂಸ್ಥೆ.

ಬ್ರಹ್ಮಬಂಧು—ಈ ಮಾತಿಗೆ ದ್ವಿಜಾಧಮ ಎಂದು ಅರ್ಥ; ದೊಡ್ಡವರ ಬಂಧುಗಳಿಗೆ ಈ ಕೆಟ್ಟ ಹೆಸರು ತಪ್ಪಿದ್ದಲ್ಲವೆಂದು ತೋರುತ್ತದೆ.

ಬ್ರಹ್ಮಚಾರಿ—ತಲೆಯೊಳಗೆ ಮೆದುಳಿದೆ ಎಂದು ತೋರಿಸುವ ಧೀರ; ಯಾರನ್ನು ಮದುವೆಯಾಗಲಿ ಎಂದು ತೀರ್ಮಾನಿಸಲು ಅಶಕ್ತನಾಗಿ ತೊಳಲುವವ; ಒಂದು ಹೆಣ್ಣು ಜೀವವನ್ನುಳಿಸಿದವ; ತನ್ನ ಪೀಳಿಗೆಯನ್ನು ಬೆಳೆಸಲೇ ಬೇಕಾಗಿಲ್ಲವೆಂಬ ಸತ್‌ಸಂಕಲ್ಪವನ್ನು ಮಾಡಿದವ.

ಬ್ರಹ್ಮಚಾರೀಪುತ್ರ—'ಟೆಸ್ಟ್ ಟ್ಯೂಬ್ ಬೇಬಿ' ಎಂದು ಇವನಿಗೆ ಇಂಗ್ಲೀಷರು ಹೇಳುವರು.

ಬ್ರಹ್ಮಾರ್ಪಣ—ಕೈಬಿಟ್ಟು ಹೋದದ್ದೇ ಬ್ರಹ್ಮಾರ್ಪಣ.

ಬ್ರಹ್ಮೇತಿ—ಬ್ರಹ್ಮನನ್ನೇ ಬ್ರಹ್ಮ ಎಂದು ಭಾವಿಸಿ ಹತ್ಯೆಮಾಡಿದವನು.

ಬ್ರಾಂದಿ—ನಿನ್ನ ಶತ್ರುವನ್ನು ನೀನು ಪ್ರೀತಿಸು ಎಂಬ ಹಿರಿಯರ ಉಪದೇಶಕ್ಕನುಸಾರವಾಗಿ ಹಲವರು ಇದರ ಮೇಲೆ ತುಂಬ ಪ್ರೀತಿಯನ್ನಿಟ್ಟಿರುತ್ತಾರೆ.

## ಭ

ಭಕ್ತ—ಭಕ್ತನಿಗೆ ಮುಕ್ತಿ, ಶಕ್ತನಿಗೆ ಭುಕ್ತಿ.

ಭಕ್ತಿವಂತ—ದೊಡ್ಡ ಅಧಿಕಾರವನ್ನು ದೇಶನಾಯಕರಿಂದ ನಿರೀಕ್ಷಿಸುವವ.

ಭಕ್ತಿ—ಭಕ್ಷಿಸುವುದಕ್ಕಾಗಿಯೇ ನೇಮಕವಾಗಿರುವವ.

ಭಗವಂತ—ಸಾಹಿದೇವನ ಮಗ.

ಭಂಗ—ಭಂಗಪಟ್ಟುಂಬ ಬಿಸಿಯನ್ನ ಭಂಗಪಡದುಂಬ ತಂಗಳಿಗಿಂತ ಲೇಸು.

ಭಗೀರಥ—ಕಾರಿಗೊಡೆಯ; ಬಹಳ ವರ್ಷಗಳ ತಪಸ್ಸಿನಿಂದ ರಥವನ್ನು ಪಡೆದವ.

ಭಂಗೀಕರಿಸು— ಭಂಗಿಯನ್ನು ಅಂಗೀಕರಿಸು.

ಭಜನೆಕೂಟ—ಗುಂಪಿನಲ್ಲಿ ಗೋವಿಂದ ಎಂದು ಕೂಗಲಿಚ್ಛಿಸುವವರ ಸಂದಣಿ.

ಭಟಸಾರ್ವಭೌಮ—ಮಹಾದಂಡನಾಯಕ.

ಭಂಡ—ನಮ್ಮಿಂದ ಸಾಲ ಕೇಳಿ ತೆಗೆದುಕೊಳ್ಳುವಾಗ, 'ನಿಮಗೆ ನಾನು ಚಿರ-ಋಣಿ' ಎಂದು ಹೇಳುವವ; "ಮಾತಿಗಂಜದವ ಭಂಡ."

ಭರ್ತೃಹರಿ—ಭರ್ತೃವಿಗೆ........?

ಭದ್ರಾಕರಣ—ಭದ್ರ, ಭದ್ರ, ಎಂದು ಪದೇ ಪದೇ ಹೇಳಬೇಕಾದ ಪ್ರಮೇಯ; ವಪನ.

ಭದ್ರಾಸನ—ಇದರಲ್ಲಿ ಕೂತವನು ಜಪ್ಪಯ್ಯ ಎಂದರೂ ಏಳುವುದಿಲ್ಲ; ನೇಲವೇ ಎಲ್ಲಕ್ಕಿಂತ ಭದ್ರ.

ಭಯ—ಪಿಶಾಚಿಗಳ ಉಗಮಸ್ಥಾನ.

ಭಯಗ್ರೀವ—ಚಾಟಿ ಏಟು ಎಲ್ಲಿ ಬೀಳುವುದೋ ಎಂಬ ಕಾರಣದಿಂದ ನಡು-ಗುವ ಹಯ.

ಭಯದ್ರಥ—ಟ್ಯಾಂಕ್.

ಭಯಸ್ಕರಶಿಕ್ಷಣ—ಪ್ರೈಮರಿಶಾಲೆಗಳಲ್ಲಿನ ವಿದ್ಯಾಭ್ಯಾಸಕ್ರಮ.

ಭಯಾನಖ—ಹುಲಿ; ವೀಣಾವಿದ್ವಾಂಸರು ಹಲವರು..

ಭರತಖಂಡ—'ಮ್ಲೇಚ್ಛೈರಂತೇತು ಸರ್ವತಃ' ಎಂದು ಮತ್ಸ್ಯ ಪುರಾಣದಲ್ಲಿ ಹೇಳಿರುವಂತೆ, ನಾವೆಲ್ಲ ಮ್ಲೇಚ್ಛರಂತೆ ವರ್ತಿಸುವಾಗ, ಇದರ ಅವನತಿ ಸಂಪೂರ್ಣ.

ಭರವಸೆ—ಚುನಾವಣೆ ಕಾಲದಲ್ಲಿ ಇದು ಬಹು ಅಗ್ಗವಾಗಿ ದೊರೆಯುತ್ತದೆ.

ಭಲಾ—ಕರ್ತವ್ಯ ಮಾಡಿದಾಗಲೂ ನಾವು ಈಗ ಇದನ್ನು ಹೇಳಬೇಕಂತೆ; ಭಲಾ ಜೆಟ್ಟಿ ಅಂದರೆ, ಕೆಮ್ಮಣ್ಣು ಮುಕ್ಕಿದ; ಆದ್ದರಿಂದ ಇನ್ನೇನಾದರೂ ಹೇಳಿ ಮೆಚ್ಚಬೇಕಾಗುತ್ತದೆ.

ಭಸಾಕಂಪ—ಸಭಾಕಂಪದಿಂದ ಹೀಗಾಗುವುದುಂಟು.

ಭಷಣ—(ಅನು) ನಾಯಿಯ ಬೊಗಳು; ನಾಯಕನದಕ್ಕೆ ಭಾಷಣವೆನ್ನುತ್ತಾರೆ.

ಭವನೇಶ್ವರೀ—ಮನೆಯಾಕೆ.

ಭವನೋದ್ಧರ—ಉಗ್ರಾಣ.

ಭವಿಷ್ಯಕಾಲ—ನಾವು ಶ್ರೀಮಂತರಾಗಿ ಸುಖದಲ್ಲೋಲಾಡುವ ಕಾಲ; ಭೂತ-ಕಾಲದ ಪ್ರಭಾವದಿಂದ ಅನೇಕರ ಭವಿಷ್ಯ ತುಂಬ ಭಯಂಕರ.

ಭಾಗದೇಯ—ಭಾಗ ಮಾಡುವುದು.

ಭಾಗ್ಯವಂತ—ಕೂಪಾನವಂತಃ ಖಲು ಭಾಗ್ಯವಂತಃ (ರೇಷನ್ ಯುಗದಲ್ಲಿ).

ಭಾರ್ಯಾವರ್ತ—ಇದೂ ಒಂದು ಕರ್ಮಭೂಮಿ.

ಭಾರ್ಯೋಕ್ತಿ—ಆರ್ಯೋಕ್ತಿಗಿಂತ ಇದಕ್ಕೆ ಮನ್ನಣೆ ಹೆಚ್ಚು.

ಭಾರ—ಭಾರವಾದ ಪಾಪಕ್ಕೆ ಘೋರವಾದ ನರಕ; ಆದ್ದರಿಂದ ದೇಹದ ಭಾರವನ್ನು ಕಡಮೆ ಮಾಡಿಕೊಳ್ಳಲೇಬೇಕು.

ಭಾವಜೀವಿ—ಅಕ್ಕನ ಮನೆಯಲ್ಲಿದ್ದು ಕಾಲೇಜು ವ್ಯಾಸಂಗ ನಡೆಸುವ ಹುಡುಗ.

ಭಾವಮೈದುನ—ಮನೆಮುರುಕ; "ಶ್ಯಾಲಕೋ ಗೇಹ ನಾಶಾಯ."

ಭಾವಾಡಿಗ—ಕವಿ.

ಭಾಷಣ—ಕೈಲಾದವರು ಮಾಡುತ್ತಾರೆ, ಕೈಲಾಗದವರು ಆಡುತ್ತಾರೆ (ಗಾದೆ). ಮೌನಸ್ಯ ಕಡಗಂ ನಾಸ್ತಿ.... ಆದ್ದರಿಂದ ಭಾಷಣವೇ ಭೂಷಣ.

ಭಾಷಾಂತರ—ಬರೀ ವೇಷಾಂತರ ಮಾತ್ರ ಅಲ್ಲ, ದೋಷಾಂತರವೂ ಇದಕ್ಕೆ ಸೇರಿದೆ.

ಭಿಕ್ಷಾಪತ್ರ—ಚಂದಾಪಟ್ಟಿ.

ಭಿಕ್ಷುಕರು—ಎಲ್ಲರೂ.

ಭಿತ್ತಿಗ—ಅಡ್ಡಗೋಡೆ ಮೇಲೆ ಕುಳಿತಿರುವವ.

ಭಿತ್ತಿಪುಷ್ಪ—ಯಾರೂ ಒಲ್ಲದ ಹೆಣ್ಣು (ಆಂಗ್ಲ).

ಭಿನ್ನವತ್ತಳೆ—ಊರಲ್ಲಿ ಪಾರ್ಟಿ ಬಿದ್ದು, ಒಂದು ಪಾರ್ಟಿಯವರು ತಮ್ಮ ಪ್ರತಿಷ್ಠೆಯನ್ನು ಹೆಚ್ಚಿಸುವುದಕ್ಕಾಗಿ ಯಾರನ್ನೋ ಕರೆದು ಅರ್ಪಿಸುವ ಭಿನ್ನವತ್ತಳೆ.

ಭಿನ್ನಣಿಗ—ಪದಾರ್ಥಗಳ ಭಿನ್ನತೆಯನ್ನು ಕುರಿತು ಚರ್ಚಿಸುವವ, ವಿಜ್ಞಾನಿ.

ಭಿನ್ನಾಭಿಪ್ರಾಯ—ಗಂಡಹೆಂಡಿರಲ್ಲಿ ಭಿನ್ನಾಭಿಪ್ರಾಯ ತಲೆದೋರಿದಾಗಲೆಲ್ಲ ಹೆಂಡತಿಗೆ ಅದರ ಅರಿವು ಆಗುವುದೇ ಇಲ್ಲ.

ಭಿಕ್ಷುರಾಕ್ಷಸ—ಹಿಂದೆ ಇಂಥವರಿದ್ದರೆಂಬುದಕ್ಕೆ ಈ ಹೆಸರು ಬೌದ್ಧ ಜಾತಕಗಳಲ್ಲಿ ಬಂದಿರುವುದೇ ಸಾಕ್ಷಿ.

ಭೀತಿಮಾರ್ಗ—ಶತ್ರುವಾದವನು ಬೇಡಿದುದನೆಲ್ಲ ಕೊಟ್ಟು ಕೈಮುಗಿಯುವುದು.
ಭೀಮನ ಗದೆ—ಇದನ್ನು ಬೀಸಣಿಗೆಯಾಗಿಯೂ ಉಪಯೋಗಿಸಲು ಬರುವುದೆಂಬುದು, ಭೀಮನ ಅನುಭವ.
ಭೀಮನ ತಿಧಿ—"ಮದಗಜಮೆರಡರ ಬಾಲದ ಮೊದಲಂ ಪಿಡಿದೆತ್ತಿಯೊತ್ತಿನುರ್ಗುತ್ತಿರೆ ಆಸ್ಯದಿನೊಗುವ ರಕ್ತಂ ಉರಿಯೆನೆ ತಿದಿಯೊತ್ತುವ ಕಮ್ಮರಂಬೊಲ್ ಇರ್ದಂ ಭೀಮಂ."
ಭುಕ್ತಿಮಾರ್ಗ—ಭಕ್ತಿಮಾರ್ಗದಿಂದಲೇ ಅನೇಕರಿಗೆ ಈ ದಾರಿಯೂ ಸುಲಭ.
ಭೂಕೈಲಾಸ—ಕೈಲಾಸ ಇಲ್ಲೇ 'ಕೈ' ಕೊಟ್ಟಾಗ.
ಭೂತಕಾಲ—ನಡುನಿಶಿ.
ಭೂಮಿ—ದಿನದಿನಕ್ಕೂ ತಣ್ಣಗಾಗುತ್ತಿರುವ ಒಂದು ಗೋಳ.
ಭೂಮಿಲೇಪನ—ಇದನ್ನೇ ಹಲವರ ಮುಖಕ್ಕೂ ಹಚ್ಚುವರು.
ಭೇರಿ—ಭೇರೀ ಸ್ತ್ರೀ ದುಂದುಭಿಃ ಪುಮಾನ್ (ಇತ್ಯಮರಃ); ಒಟ್ಟಿನಲ್ಲಿ ಸಂಸಾರ ಹೀಗಾದರೆ ಅವಾಂತರವೋ ಅವಾಂತರ.
ಭೇಸ್ತುವಾರ—ಎಲ್ಲ ದಿನಗಳೂ.
ಭೋಗನಿದ್ರೆ—ಉಂಡುಮಲಗಿದಾಗ.
ಭೋಜನ—ತಕ್ರ ಸಿಕ್ಕುವವರೆಗೆ ಭೋಜನವಾಯಿತು ಎಂದು ಹೇಳಲಾಗುವುದಿಲ್ಲ. ತಕ್ರಾಂತಂ ಖಲು ಭೋಜನಂ; ಉಪವಾಸ ಪ್ರಾರಂಭಮಾಡುವ ಮೊದಲು ಆಚರಿಸಬೇಕಾದ ಒಂದು ವ್ರತ.
ಭೋಜನಕಸ್ತೂರಿ—ಸಂಸ್ಕೃತ ಗ್ರಂಥ ಭಂಡಾರದಲ್ಲಿ ಇದೂ ಒಂದು ಭಕ್ಷ್ಯ.
ಭೋಜನಕೂಟ—ಭಕ್ಷ್ಯ-ಭೋಜ್ಯಗಳನ್ನು ಚೆಲ್ಲಿ ಬಿಸಾಕಲು ಏರ್ಪಾಡಾಗಿರುವ ಒಂದು ಸಮಾರಂಭ.
ಭ್ರಮಾಸಕ್ತ—ಮೆದುಳಿಗೆ ಸಾಣೆ ಹಿಡಿಯುವುದರಲ್ಲೇ ನಿರತ; ರಿಸರ್ಚ್ ವಿದ್ಯಾರ್ಥಿ.
ಭ್ರಮೆ—ಜನ ತಮ್ಮ ಕಡೆ ಇದಾರೆ, ಎಂದು ನಮ್ಮ ಎದುರು ಪಕ್ಷದವರು ನಂಬುತ್ತಿರುವುದು.
ಭ್ರಷ್ಟ—ನಮ್ಮ ಜಾತಿಗಿಂತ ಕೀಳುಜಾತಿಯಲ್ಲಿ ಹುಟ್ಟಿ, ಇನ್ನೂ ನಮ್ಮ ಮತವೇ ಉತ್ತಮ ಎಂದು ನಂಬಿಕೊಂಡಿರುವವನು.

## ಮ

ಮಕರಸಂಕ್ರಾಂತಿ—ಕಾಡುಕೋಳಿಗೆ ಮಕರಸಂಕ್ರಾಂತಿಯೇಕೆ ? ಆ ದಿನ ಹಬ್ಬಕ್ಕಾಗಿ ನಾಡುಕೋಳಿಗಳನ್ನು ಮಾತ್ರವೇ ಜನ ಕೊಲ್ಲುವರಲ್ಲಾ !

ಮಕರಿಕಾಪತ್ರ—ಪ್ರಾಚೀನ ಭಾರತದ ಹಾಲಿವುಡ್ ತಾರೆಯರು ಮಾಡಿಕೊಳ್ಳುತ್ತಿದ್ದ ಅಲಂಕಾರ ವಿಶೇಷ.

ಮಕ್ಕಳಯುಗ—ಈ ಇಪ್ಪತ್ತನೆಯ ಶತಮಾನ, ಮಕ್ಕಳ ಯುಗವಂತೆ; ರಾಜಕೀಯ ಆರ್ಥಿಕ ಧಾರ್ಮಿಕ ಕ್ಷೇತ್ರಗಳ ವಿದ್ಯಮಾನಗಳನ್ನು ಪರಿಗಣಿಸಿದರೆ, ಈ ರೀತಿ ಹೇಳುವುದು ಮಕ್ಕಳಿಗೆ ತುಂಬ ಅನ್ಯಾಯವೆನಿಸುತ್ತದೆ.

ಮಕ್ಕಳು—ಮನೆಯ ಭಾಗ್ಯ; ಏಕೆಂದರೆ, ಸಂಗೀತ ಕಲಿತಿರುವ ಮಡದಿ, ಮಕ್ಕಳಾಗುತ್ತಲೂ ಸಂಗೀತ ಹೇಳುವುದನ್ನು ನಿಲ್ಲಿಸುತ್ತಾಳೆ; ಮಕ್ಕಳು ಮುಂದಿನ ಮನಿ.ಆರ್ಡರುಗಳ ಪೊಳಕೆಗಳು; ಇಂದಿಗೆ ಅನ್ನದ ಮಕ್ಕಳು; ನಾಳಿಗೆ ಏನು ? ಅನ್ನದ ಮಕ್ಕಳು.

ಮಂಕ—ಮೇಷ್ಟರ ಮನೆಗೆ ಕನ್ನ ಕೊರೆದು ಕಳ್ಳತನ ಮಾಡಲು ಹೊರಡುವ ಕೇಡಿ.

ಮಂಕಿ—ಭಾರತದಲ್ಲಿ ಇದು ಒಬ್ಬನ ಹೆಸರು.

ಮಂಕುಬೂದಿ—ವೃತ್ತಪತ್ರಿಕಾಲಯಗಳಲ್ಲಿ ಇದನ್ನು ಹೆಚ್ಚಾಗಿ ಶೇಖರಣೆ ಮಾಡಿರುತ್ತಾರಂತೆ.

ಮಖ—ಮುಖ; "ಮಖಸ್ಯ ಶಿರಃ" ಎಂಬುದನ್ನು ನೋಡಿ; ಮಖದ್ವೇಷಿನ್, ಎಂಬುದನ್ನೂ ಗಮನಿಸಿ.

ಮಗ—'ಊರಿಗೆ ಅರಸನಾದರೇನು, ತಂದೆಗೆ ಮಗ; ಅವನೇ ತಂದೆಯನ್ನು ಅರಸನಂತೆ ಪೀಡಿಸುತ್ತಾನೆ. 'ಒಬ್ಬ ಮಗ ಮಗನಲ್ಲ'. ಇದ್ದ ಆಸ್ತಿಯನ್ನೆಲ್ಲ ಹಾಳು ಮಾಡಲು ಬಂದ ಶತ್ರು.

ಮಗಳು—ಅನ್ಯರಲಿ ಜನಿಸಿದ ಅಂಗನೆಯು ಕರತಂದು ತನ್ನ ಮನೆಗವಳ ಯಜಮಾನಿಯೆನಿಸಿದ ತಪ್ಪಿಗಾಗಿ ಮಗಳನ್ನು ಅಳಿಯನ ಕೈಗೊಪ್ಪಿಸಿ ಬಿಡಬೇಕು.

ಮಂಗ—ಬಾಲಶಾರದೆ ಎನಿಪ್ಪ, ಮಂಗ (ಮಂ. ರಾ. ನಿಘಂಟು).

ಮಂಗನ್ಯಾಸ—ಮೈ ಕೈ ಕೆರೆದುಕೊಳ್ಳುವುದು.

ಮಂಗಲಾಚು—ಕಡಲೆ ಬಿತ್ತಕ್ಕೆ ಕೈನೀಡು.

ಮಂಗಳ—ಇದನ್ನು ಸಂಗೀತ ಕಚೇರಿಗಳಲ್ಲಿ ಹಾಡಿದರೆ, ಸಭಿಕರಿಗೆ ತೃಪ್ತಿ ಉಕ್ಕಿ ಬರುತ್ತದೆ.

ಮಂಗಳಾಷ್ಟಕ—ಬೆಂದ ಬಾಯಿಗೆ ಬಂದದ್ದೇ ಮಂಗಳಾಷ್ಟಕ, ನೊಂದ ಹೆಂಗಸು ಹೇಳಿದ್ದೇ ಹಾಡು.

ಮಚ್ಚುಬಾಯಿ—ಕೆಟ್ಟಬಾಯಿಗಳಲ್ಲಿ ಇದೂ ಒಂದು.

ಮಜ್ಜನೋನ್‌ಮಜ್ಜನ—ಜಲಪಿಶಾಚಿಗಳೆರಡು.

ಮಜ್ಜಿಗೆ—ಇದನ್ನು ಸೇವಿಸಲು ಈಚಲಮರದ ಬುಡ ಹುಡುಕುವವರೂ ಇದಾರೆ.

ಮಂಜು—ಜಾತಿ-ಮತ-ಆಸ್ತಿ ಇವುಗಳಿಂದ ಬರುವ ಒಂದು ನೇತ್ರರೋಗ.

ಮಂಜುಘೋಷ—ಗಡಗಡ ನಡುಕ.

ಮಂಜುಭಟ್ಟ—ಅಮರಕೋಶಕ್ಕೆ ಮಂಜು ಕವಿಸಿದ ಟೀಕಾಕಾರ.

ಮಟ್ಟ—ಡಿಗ್ರಿಯಿಂದ ವಿದ್ಯೆಯ ಮಟ್ಟವನ್ನು ಪತ್ತೆ ಹಚ್ಚಬಹುದು.

ಮಠ—ಹೆಗ್ಗಣಗಳ ನೆಲವೀಡು; ಮನೆಯೇ ಮಠ ಅನೇಕರಿಗೆ, ಸನ್ಯಾಸ ತೆಗೆದು ಕೊಳ್ಳದಿದ್ದರೂ ಸಹ; ಶಾಸ್ತ್ರಗಳನ್ನು ಮಠನ, ಅಂದರೆ, ಕುಟ್ಟಿ ಪುಡಿ ಮಾಡುವ ಜಾಗ.

ಮಡ್ಡಿ—ಕೆಸರು ತುಂಬಿರುವುದರಿಂದ, ತಲೆಯೊಳಗೆ.

ಮಡ್ಡು—ಹೇಳೋನಿಗೆ ಹೆಡ್ಡಿಲ್ಲದಿದ್ದರೆ, ಕೇಳೋನ ಹೆಡ್ಡಲ್ಲಿ ಮಡ್ಡೆ ? (ಗಾದೆ) ಮಡ್ಡು ಎಂದರೆ ಒಂದು ವಾದ್ಯ: ಮೃತ್+ಅಂಗ =ಮೃದಂಗ.

ಮಡ್ಡುಹುಲ್ಲು—ಗೊಡ್ಡೆಮ್ಮೆಗೆ ಇದೇ ಆಹಾರ.

ಮಣಗ್ರಾಹಿ—ಒಂದು ಮಣ ತೂಕವನ್ನು ಅನಾಯಾಸನಾಗಿ ಹಿಡಿದೆತ್ತುವವ.

ಮಣೆಯಗಾರ—ಮಣೆ ವಿಷಯವನ್ನು ಲೆಕ್ಕಮಾಡುವ ನೌಕರ; ಮಣೆಯಗಾರ ಹೆಂಗೋ ಹಣಗಾರನಿಗೂ ಬೇಕು (ಗಾದೆ).

ಮಣೆಗಾರ—ಸಭಾಮಂದಿರಕ್ಕೆ ಜಮಖಾನೆಯನ್ನೊದಗಿಸಿದವ; ಕಡೆತನಕ ಕೇಳುತ್ತಾ ಕುಳಿತಿರುವವ.

ಮಣ್ಣೆಣ್ಣೆ—ಲಭೇತ ಸಿಕತಾಸು ತೈಲಮಪಿ ಯತ್ನತಃ ಪೀಡಯನ್, ಎಂಬ ಉಕ್ತಿಯಂತೆ ತೋಡಿದಾಗ ಸಿಕ್ಕಿದ್ದು.

ಮತ—ಲೋಕದಲ್ಲಾಗಿರುವ ಆಗುತ್ತಿರುವ ರಕ್ತಪಾತಕ್ಕೆಲ್ಲ ಮುಖ್ಯ ಕಾರಣ. ರಕ್ತಪಾತದಿಂದ ಸ್ವರ್ಗ ಸಿಗುತ್ತದೆ ಎಂದು ಬೋಧಿಸುವ ರೀತಿ.

ಮತ್ಸ್ಯಪುರಾಣ—ಮೀನು ಹಿಡಿಯುವ ದೊಡ್ಡ ಮನುಷ್ಯರು ಕೊಚ್ಚಿಕೊಳ್ಳುವ ಜಂಬ.

ಮಂತ್ರ—ಎಲೆಗೆಲ್ಲ ಒಂದೇ ಮಂತ್ರ : 'ಹಾಸಿ ಉಂಡು ಎಸೆ'.

ಮಂತ್ರಿ—ನಾವು ಇನ್ನೂ ಚೆನ್ನಾಗಿ ಮಾಡಬಲ್ಲ ಕೆಲಸ ಕಾರ್ಯಗಳನ್ನು, ನಮಗಿಂತ ಅಸಮರ್ಪಕವಾಗಿ ಮಾಡಲು, ನಾವು ಚುನಾಯಿಸುವ ಮನುಷ್ಯ.

ಮಂತ್ರೀಪುತ್ರ—ಭಾಗ್ಯವಂತ.

ಮಂತ್ರೀಶ್ವರ—ಲೇ ಎನ್ನುವುದಕ್ಕೆ ಅವಳೇ ಇಲ್ಲ, ಮಗನ ಹುದ್ದೆ ಮಂತ್ರೀಶ್ವರ (ಗಾದೆ).

ಮತ್ತು—ನುಡಿಯಲ್ಲೂ ನಡೆಯಲ್ಲೂ ನಾವು ಬಳಸುತ್ತೇವೆ, ಇದನ್ನು.

ಮತ್ತೊಮ್ಮೆ—'ವನ್ಸ್‌ಮೋರ್' ಎಂಬ ಕೂಗು; ನಾಟಕಗಳಲ್ಲಿ ನಾಯಕ ಆತ್ಮಹತ್ಯೆ ಮಾಡಿಕೊಂಡಮೇಲೆ, ವನ್ಸ್‌ಮೋರ್ ಕೂಗಿ, ನಾವು ಆ ದೃಶ್ಯವನ್ನು ನೋಡಿ ಆನಂದಪಡಬಹುದು.

ಮತ್ಸ್ಯಗಂಧಿ—ಭೀಷ್ಮಬ್ರಹ್ಮಚರ್ಯಕ್ಕೆ ಕಾರಣಳು.

ಮಂದಕರ್ಣ—ಕಿವುಡನಿಗಿಂತ ಇವನಿಂದ ಆಪತ್ತು ಜಾಸ್ತಿ; ಬಧಿರಾನ್ ಮಂಡಕರ್ಣಃ ಶ್ರೇಯಾನ್ ಎಂದಿದ್ದರೂ.

ಮಂದಹಾಸನ—ಆಕೆ ಎದುರಿಗೆ ನಿಂತಿರುವಾಗ, ಈತನ ರೀವಿ.

ಮದ್ಯಪಾನ—ಕುಡಿದಾಗಿನ ಖುಷಿಗಿಂತ, ಅಮಲು ಇಳಿದಾಗ, ಮತ್ತೆ ಜಗತು ಮುತ್ತಿಕೊಳ್ಳುವಾಗಿನ ಸಂಕಟ ತುಂಬ ಹೆಚ್ಚಂತೆ.

ಮದ್ಯಪಾನಿ—ನೀರು ಬೆರಸಿದ ಹೆಂಡ; ಶೇಕಡ ೨೮ ಬೀರ್; ದುಃಖದಲ್ಲಿ ಹುಳಿ ಹಿಂಡಿ, ಹೆಪ್ಪು ಹಾಕಿ, ಅದನ್ನು ಕಡೆದು, ಅದರೊಳಗಿನ ನವನೀತವನ್ನು ತಿನ್ನಬಯಸುವವ.

ಮದ್ಯಮಾವತಿ—ಹೆಂಡದ ಅಮಲಿನ ನಾವು ಹಾಡುವ ಗೀತದ ಧಾಟಿ.

ಮದ್ಯವಯಸ್ಸು—ಹೆಂಡದಾಸೆ ಮಾಡುವ ವಯಸ್ಸು.

ಮದ್ಯಸ್ಥ—ಮದ್ಯದಲ್ಲೇ ಮುಳುಗಿರುವವನು.

ಮರ್ದನಂ—ಗುಣವರ್ಧನಂ,

ಮರ್ದನಾರೀಶ್ವರ—ಸತಿಯ ಮೇಲೆ ಕೈಮಾಡುವ ಪತಿ.

ಮದ್ಯಾಹ್ನ—ಹೆಂಡದಂಗಡಿ ತೆರೆಯುವ ಹೊತ್ತು.

ಮಂದಾಕ್ರಾಂತಿ—ಆಧುನಿಕ ಕ್ರಾಂತಿವೀರರಿಗೆ ಇದು ಹಿಡಿಸದು.

ಮಂದಿ—ಮಂದಿ ಎರಡು ವಿಧ; ಹುಚ್ಚಾಸ್ಪತ್ರೆಯೊಳಗಿರುವ ಮಂದಿ, ಅಲ್ಲಿ ಇರಬೇಕಾದ ಮಂದಿ.

ಮಂದಿಮಾಗಧರು—ಪ್ರಜಾಸರ್ಕಾರ ಬಂದಾಗ, ಹಿಂದಿನ ವಂದಿಮಾಗಧರೆಲ್ಲ ಈಗಿನ ಮಂದಿಮಾಗಧರಾಗಿ, ಮಂದಿಯನ್ನೇ ಹೊಗಳಲು ಪ್ರಾರಂಭಿಸಿ-ದಾರೆ.

ಮಂದಿರಪಶು—ಮಾವನ ಮನೆಯಲ್ಲೇ ಠಿಕಾಣಿ ಹೂಡಿರುವ ಅಳಿಯ.

ಮದುವೆ—ಸಂಸಾರದಿಂದ ಸೊನ್ನೆಯನ್ನು ತೆಗೆಯುವ ಸಂಸ್ಕಾರ; ಒಂದು ರೀತಿಯ ಲಾಟರಿ; ಪ್ರತಿಯೊಬ್ಬನೂ ತನಗೆ ಬಂದಿರುವುದು ಪ್ರಥಮ ಬಹುಮಾನವೆಂದೇ ತಿಳಿದುಕೊಳ್ಳುವನು; ವಿವಾಹವಿಚ್ಛೇದನ ಬಯು-ಸುವವರು ಇದನ್ನು ಮಾಡಿಕೊಳ್ಳಲೇ ಬೇಕು; ಸ್ವಕಾರ್ಯವನ್ನೆಲ್ಲ ಸ್ವಾಮಿ ಕಾರ್ಯವನ್ನಾಗಿ ಮಾಡಿಕೊಳ್ಳುವ ಬಗೆ.

ಮಧುರಿಪು—ಜಗತ್ತು ಹಾಳಾಗುತ್ತಿದೆ ಎಂದು ನಂಬಿ, ಜನರ ಸಂತೋಷವನ್ನು ಕೆಡಿಸುವವ.

ಮಧುರೆ—ಮಧುರೆಯನ್ನು ನೋಡಿ ಸಾಯಿ; ಎಂಬ ಸಲಹೆಯನ್ನನುಸರಿಸು ವುದು ಈಚೆಗೆ ಕೊಂಚ ಕಷ್ಟವಾಗುತ್ತಿದೆಯಂತೆ, ಅಲ್ಲಿಯ ಮುನಿಸಿ ಪಾಲಿಟಿಯ ಕಾರ್ಯಕ್ರಮದಂತೆ.

ಮಧ್ಯಕ್ಷ—ಅಸೆಂಬ್ಲಿಗಳಲ್ಲಿನ ಸ್ಪೀಕರ್ ಮಹಾಶಯ.

ಮಧ್ಯಕ್ಷಾಮ—ಇದರಿಂದ ಹೆಂಗಸರೇ ಹೆಚ್ಚು ಪೀಡಿತರು.

ಮಧ್ಯಮವರ್ಗ—ಪ್ರತಿ ತಿಂಗಳ ೧೫ನೇ ತಾರೀಖಿನಿಂದ ೩೦ ರ ವರೆಗೆ ಕೈ ಸಾಲಕ್ಕಾಗಿ ಹಲ್ಲುಕಿರಿಯುವ ವರ್ಗ; ಬದುಕುವುದಕ್ಕಾಗಿ ಸಾಯುವ ವರ್ಗ; ಇಮಿಟೇಷನ್ ಸಿಲ್ಕ್-ಇಮಿಟೇಷನ್ ವಜ್ರ ಇತ್ಯಾದಿಗಳ ಗಿರಾಕಿ ಗಳು ಅವರೇ; ಶ್ರೀಮಂತರೆನಿಸಿಕೊಳ್ಳಲು ಪರದಾಡುತ್ತಿರುವ ಬಡವರು.

ಮಧ್ಯವಯಸ್ಸು—ಕನಸು ತಿಳಿದು ಎಚ್ಚರವಾಗುವ ಕಾಲ.

ಮಧ್ಯಸ್ಥ—ಎರಡು ಕಡೆಯುವವರ ಬೈಗಳಿಗೂ ಇವನೇ ಗುರಿ.

ಮನಸ್ಕರಿಸು—ಮನಸಾ ನಮಸ್ಕರಿಸು.

ಮನ್‌ಮಥ–ಮನಸ್ಸನ್ನು ಮಥನಮಾಡುವವ; ಬಾಣಪ್ರಯೋಗದಿಂದ ಒಂದನ್ನೆರಡು ಮಾಡುವ ಬದಲು ಎರಡನ್ನೊಂದಾಗಿಸುವ ಜಾಣ ಬಿಲ್‌ಗಾರ.

ಮನಸ್ಸಾಕ್ಷಿ—ಮಾಡದ ತಪ್ಪನ್ನು ಮಾಡಬೇಕಾಗಿತ್ತು ಎಂದೆನಿಸುವ ಒಳ-ಮನಸ್ಸು.

ಮನಿಆರ್ಡರ್—ಮಾವನ ಈ ಆರ್ಡರನ್ನು ಅಳಿಯ ಸಂತೋಷದಿಂದ ಸ್ವಾಗತಿಸುವನು.

ಮನುಷ್ಯ—ಬಾಲ ಕಳೆದುಕೊಂಡ ಕಪಿ; ಇದರ ಬುದ್ಧಿ ಅತಿ ತೀಕ್ಷ್ಣವೆಂದು ಇದೇ ಜಂಬಕೊಚ್ಚಿಕೊಳ್ಳುತ್ತದೆ, ಕತ್ತೆಯ ಮೆದುಳು, ಹುಲಿಯ ಹೃದಯ, ಕಪಿಯ ಮೈ, ತೋಳನ ಹಸಿವು–ಇವುಗಳಿಂದ ಕೂಡಿದ ಒಂದು ದೇವಾಂಶ; ಮಾನವ ಕುಲವನ್ನೇ ನಿರ್ಮೂಲ ಮಾಡಲು ತೊಡಗಿರುವ ಒಂದು ಕ್ರಿಯೆ; ನಗಬಲ್ಲ, ನೋಡಿದರೆ ನಗೆಯುಕ್ಕಿಸುವ ಏಕೈಕ ಪ್ರಾಣಿ; ವೋಟುಮಾಡಿ ವೈದ್ಯರನ್ನಾರಿಸುವ ರೋಗಿ; ಎಲ್ಲ ಪ್ರಾಣಿಗಳಿಗಿಂತಲೂ ಇದೇ ಅತಿ ಕ್ರೂರ.

ಮನೆ—ಸಣ್ಣವರು ದೊಡ್ಡವರೆಂದೆನಿಸಿಕೊಳ್ಳುವ, ದೊಡ್ಡವರು ಸಣ್ಣವರೆಂದೆನಿಸಿಕೊಳ್ಳುವ ಜಾಗ; ಇಲಿ, ಜಿರಲೆ, ಹೆಗ್ಗಣ, ಇರುವೆ, ನೊಣ, ಹಲ್ಲಿ ಇವುಗಳ ನಡುವೆ ನರಮನುಷ್ಯ ವಾಸಮಾಡುವ ಜಾಗ.

ಮನೆತನ—ಗಂಡನ ಮನೆತನ ಒಳ್ಳೆಯದಾಗಿರಬೇಕು; ಆದರೆ, ಅದನ್ನು ಅವನು ತನ್ನೊಡನೆ ತರಬಾರದು, ಎಂಬುದೇ ಹೆಂಡತಿಯ ಹಟ.

ಮನೆದೇವರು—ಮನೆದೇವರನೊಯ್ಯೆ ಕಳ್ಳನು, ಶುನಕನೆಬ್ಬಿಪುದು ; ಆದ್ದರಿಂದ....

ಮನೆಯುಜಮಾನ—ಯಜಮಾನಿ.

ಮಮತಾ—ಆಂಗಿರಸ ಮಹರ್ಷಿಯ ಮಗ ಉಚಿಥ್ಯಮುನಿಗೆ ಮಮತಾದಿಂದ ತಪ್ಪಿಸಿಕೊಳ್ಳಲಾಗಲಿಲ್ಲ, ಅಂದಮೇಲೆ, ನಮ್ಮ ನಿಮ್ಮ ಪಾಡೇನು ?

ಮರ್ಮರ—ಪಿಸುಮಾತು (ಆಂಗ್ಲ ?).

ಮರ್ಮರೀಕೆ—ಸದಾ ಪಿಸಪಿಸ ಮರ್ಮರ್ ಮಾಡುವ ಹೆಂಗಸು.

ಮರ್ಯಾದೆ—ನಾವು ಹೇಳಿಕೊಡದೇನೇ ಮಕ್ಕಳು ಕಲಿಯಬೇಕಾದದ್ದು ; ಆಚೆ ನೂಕೋಣ ಎಂದೆನಿಸುವವರಿಗೆ ದಯಮಾಡಿಸುತ್ತೀರಾ ಎಂದು ಹೇಳುವ

ರೀತಿ.

ಮರಕೋಶ—ಅಮರವಲ್ಲದ ಕೋಶ; ಅನರ್ಥಕೋಶ.

ಮರಮಾತ್ಮಾ—ಆಬ್ರಹ್ಮಸ್ತಂಬಪರ್ಯಂತಂ ಇರುವ ಚೈತನ್ಯ ಮರಗಳಲ್ಲಿ ಹರಿದಾಗ.

ಮರವೆ—ಮೈತುಂಬ ಸಾಲ ಇರುವವನಿಗೆ ದೇವರು ಕೊಡುವ ಪರಮಾನುಗ್ರಹ.

ಮರವಾಳ—ನಾಟಕದಲ್ಲಿ ರಾಜನ ಕತ್ತಿ.

ಮರಿಯಾನೆ—ಕನ್ನಡಿಗರು ಮಕ್ಕಳನ್ನು ಮುದ್ದಿಸುವಾಗ ಹೇಳುತ್ತಿದ್ದ ಉಪಚಾರೋಕ್ತಿ.

ಮರುಕ—ಎರಡು ವಿಧ; ತಾಯಿಮರುಕ, ಬಾಯಿಮರುಕ.

ಮರುಳು—ಜನ ಮರುಳಾದರೆ, ಜಾತ್ರೆ ಮರುಳಾಗದೆ ಇರುತ್ತದೆಯೆ? (ಗಾದೆ).

ಮಲಿನಮುಖಿ—ನಳಿನಮುಖಿಯ ರೂಪಾಂತರ.

ಮಲ್ಲಿ—ಪೈಲ್ವಾನಗಿತ್ತಿ.

ಮಲೆಯಮಾರುತ—ಕವಿಗಳಿಗಿಂಪು, ಆದರೆ, ಮಲೇರಿಯಾಕಾರಕ.

ಮಷೀಪರ್ಣ್ಯ—ಕರೀಸಾಹಿತಿ.

ಮಸ್ತಕಜ್ವರ—ಪುಸ್ತಕ ಪಂಡಿತರಿಗೆ ಬರುವ ಒಂದು ರೋಗ.

ಮಸೆ—ಚಳಿಗದಿರ್ಗಲ್ಲಿನೊಳು ದಾಡಿಯಂ ಮಸೆದು (Raghe) ಜೂಪು ಮಾಡುತ್ತಿದ್ದರಂತೆ.

ಮಹನೀಯ—ನಮ್ಮಿಂದ ಏನೊಂದೂ ಬಯಸದೆ, ನಮ್ಮನ್ನು ಸ್ತೋತ್ರ ಮಾಡುವವ.

ಮಹನೀಯರೇ—ನಮಗೆ ಅಷ್ಟಾಗಿ ಪರಿಚಯವಿಲ್ಲದವರನ್ನು ನಾವು ಈ ರೀತಿ ಸಂಬೋಧಿಸಬಹುದೇ ಹೊರತು, ಪರಿಚಿತರನ್ನು ಹೀಗೆನ್ನಲು ಮನವೊಪ್ಪದು.

ಮಹರಾಯ—ಮಾಡಿಬಡಿಸಿದ್ದನ್ನು ಮರುಮಾತಿಲ್ಲದೆ ಉಣ್ಣುವವ.

ಮಹಳೀಯ—ಮಹಿಳೆಯಂತಿರುವ ಮಹನೀಯ.

ಮಹಾತ್ಮರು—ಮಹಾತ್ಮರು ಯಾವ ದೇಶದಲ್ಲೂ ಇದುವರೆಗೂ ಹುಟ್ಟಿಲ್ಲ; ಹುಟ್ಟುವುದೆಲ್ಲ ಶಿಶುಗಳೇ.

ಮಹಾತ್ಮುಷ್ಟಿಜ್ಞಾನಮುದ್ರೆ—ತೇಗು.

ಮಹಾಪ್ರಾಣಿ—ದೊಡ್ಡ ವ್ಯಕ್ತಿ.

ಮಹಾಬಿಲ—ಆಕಾಶ; ಬಾಯಿ.

ಮಹಿಷಿ—ಎಮ್ಮೆ; ಅರಸಿಯರಿಗೂ ಈ ಹೆಸರು ಏಕೆ ಬಂತೋ ಗೊತ್ತಿಲ್ಲ.

ಮಳೆ—ಅತೀ ಎತ್ತರದ ಜಲಪಾತ.

ಮಾರ್ಕ್ಸಂಡೇಯ—ಬಡತನದಿಂದ ತಪ್ಪಿಸಿಕೊಳ್ಳಲು ಕಾರ್ಲ್ ಮಾರ್ಕ್ಸನು ತಬ್ಬಿಕೊಳ್ಳುವವ.

ಮಾರ್ಕೋಟಕ—ಉತ್ತರಪತ್ರಿಕೆಗಳನ್ನು ಓದಿ ಕಡಮೆ ನಂಬರ್ ಕೊಡುವ ಕ್ರೂರಿ.

ಮಾರ್ಕಂಡೇಯ—ಪರೀಕ್ಷಕ.

ಮೂಗರ್ಜಿ—ಬರಹ ಕಲಿತವನ ಮೊದಲನೆಯ ಕೈಂಕರ್ಯ.

ಮಾರ್ಗಣ—ಅಣುಬಾಂಬು.

ಮಾಘಸ್ನಾನ—ಮಾಘ ಓದುವಂತೆ ಮಗನನ್ನು ಬಲವಂತಪಡಿಸಿ, ಅವನು ಕೆಟ್ಟಾಗ, ಕಣ್ಣೀರಲ್ಲಿ ಕೈತೊಳೆದುಕೊಳ್ಳುವುದು.

ಮಾರ್ಜಾಲ—ಮಾರುವುದರಲ್ಲಿ ಜಾಲವಿದ್ಯೆ ತೋರಿಸುವವನು; ವಾದ ಪ್ರತಿವಾದಿಗಳಿಬ್ಬರಿಂದಲೂ ಲಂಚ ತಿಂಬ ನ್ಯಾಯಪತಿ; ಹಾಲಿನ ಸಮುದ್ರಕ್ಕೆ ಅಗಸ್ತ್ಯಮಹರ್ಷಿ; ಮೂಷಿಕನಾಶನ ದೀಕ್ಷೆಯನ್ನು ವಹಿಸಿರುವ ಮಹೋಪಕಾರಿ.

ಮಾಟ—ಅಂಕಿ-ಅಂಶಗಳಿಂದ ಯಾವ ಸಿದ್ಧಾಂತವನ್ನೂ ಸಾಧುವೆನಿಸುವ ಶಾಸ್ತ್ರ.

ಮಾಟಗಾರ—ಮಾತುಗಾರ.

ಮಾಣಿ—ಹೋಟಲುಗಳಲ್ಲಿನ ರೇಡಿಯೊ ಗಲಿಬಿಲಿಗಿಂತ ಗಟ್ಟಿಯಾಗಿ ಕೂಗಬಲ್ಲವ.

ಮಾಣಿಕ್ಯ—ಮಾಣಿಗಳಲ್ಲಿ ಮುಖ್ಯಸ್ಥ.

ಮಾಣಿಷ್ಠ—ಮಾಣಿಗಳಲ್ಲಿ ಶ್ರೇಷ್ಠ; ಇಂಗ್ಲಿಷಿನವರು ಇವನನ್ನು 'ಮಾಣಿಟ್ಟರ್' ಎನ್ನುತ್ತಾರೆ.

ಮಾತಾಪಿತೃಗಳು—ಪಾಪ, ಪಾಪ.

ಮಾತು—ಖರ್ಚೇ ಇಲ್ಲದ ಉಪಚಾರ; ನಿಜಾಭಿಪ್ರಾಯವನ್ನು ಮರೆಮಾಚಲು ಒದಗುವ ಉಪಕರಣ.

ಮಾತುಬರಿ—ಈಗಿನ ಗಣ್ಯವ್ಯಕ್ತಿ.

ಮಾತೃಪಕ್ಷ—ಗಂಡಹೆಂಡಿರ ಜಗಳದಲ್ಲಿ, ತಾಯಿಯ ವಾದ, ಅಂದರೆ, ಗೆಲ್ಲುವ ಪಕ್ಷ.

ಮಾತ್ರೆ—ಇದರಿಂದ ಅನೇಕರಿಗೆ ವೈಕುಂಠ, ಕೈಲಾಸಗಳು ಬಹಳ ಸುಲಭವಾಗಿ ಸಿದ್ಧಿಸಿವೆ.

ಮಾನ—ಅನೇಕರು ಎಚ್ಚರಿಕೆ ತಪ್ಪಿ ಕಳೆದುಕೊಳ್ಳುವ ವಸ್ತು.

ಮಾನವಿಲ್ಲ—ಅನೇಕರ ಮನೆಗಿಳಿಗಿಡಬಹುದಾದ ಹೆಸರು.

ಮಾಫಲ—ಮಾವಿನಕಾಯಿ.

ಮಾಮೂಲು—"ಹಣಕ್ಕೆ ಒಂದು ಈಸಂ, ಇಪ್ಪಣಕ್ಕೆ ಒಂದು ಬೇಳೆಯು," "ಹೀಗೆ ಟೋಣೆಯದೆ ಬಿಡನು"........ಏಕೆಂದರೆ, ಅದು ಮಾಮೂಲು; ತಾನೂ ತಿಂದು ಪರರಿಗೂ ತಿನಿಸುವ ತಿನಿಸು.

ಮಾರ—ಮಾರಿಯನ್ನು ನೋಡಿ.

ಮಾರಣಾಸಿ—ಕಾಶಿಯಲ್ಲಿ ಕಾಲರಾ ತಲೆದೋರಿದಾಗ.

ಮಾರಿ—ಮಾರ ಮಾರಿಯನ್ನು ನೋಡಿ; ಹಾರಿದ್ದೆಲ್ಲ ಮಾರಿ ಪಾಲು (ಗಾದೆ) ಶತ್ರುಪಕ್ಷದ ಫೈಟರ್ ವಿಮಾನಗಳು ಬಲವಾದರೆ.

ಮಾರೀಚ—ಮಾರಿಯೂ....ಮತ್ತೆ ಹಲವು ಪರಿವಾರ ದೇವತೆಗಳೂ.

ಮಾರೋ—ಮಾರೋ ಅಮ್ಮನಿಗೆ ಗಂಡನಿಲ್ಲ; ಬೀರೋ ದೇವರಿಗೆ ಹೆಂಡತಿ ಇಲ್ಲ (ಗಾದೆ).

ಮಾಲೀಸು—ಚುನಾವಣೆಗೆ ಮೊದಲು ಚುನಾವಣಾಕ್ಷೇತ್ರದ ಪ್ರೀತಿ ಸಂಪಾದಿಸುವಿಕೆ.

ಮಾಲೆ—ಹಲವರಿಗೆ ಅಕ್ಷರಮಾಲೆ ಎಂದರಾಗದು.

ಮಾವ—ಮೊದಲನೆಯ ದೀಪಾವಳಿಗೇನೆ ಮಾವ ದಿವಾಳಿ (ಗಾದೆ) ಗಂಡಹೆಂಡಿರ ಜಗಳದಲ್ಲಿ ಮಾವ ಬಡವಾದ (ಗಾದೆ) ಹೆಂಡತಿಯ ತಂದೆಯ ಹೆಸರಿಡುವ ಕಾಯಿ-ಆವ್ರಫಲ.

ಮಾವಾಡಿಗ—ಮಾವನನ್ನು ತನ್ನ ಕೈಗೊಂಬೆಯಂತೆ ಆಡಿಸುವ ಅಳಿಯ.

ಮಾವು—ಇದರ ಸಸಿಯನ್ನು ಮಾರುವವರು ನಂಬಿಕಸ್ಥರಲ್ಲ; ಆದ್ದರಿಂದಲೇ 'ಮಾವು ಸಸಿಯನ್ನು ನೆಟ್ಟು, ಬೇವುಣಲು ಸಿದ್ಧನೀರು,' ಎಂಬ ಗಾದೆ

ನಮ್ಮಲ್ಲಿ ಪ್ರಚಾರವಾಗಿರುವುದು.

ಮಿಂಚು—ಉಚಿತವಾಗಿ ದೊರಕುವ ವಿದ್ಯುದ್ದೀಪ; ಹೊಳಪ್ರ. 'ಐವತ್ತು ವಯಸ್ಸಿಗೆ ಮಿಂಚಿದ....'

ಮಿಟಿಮಿಟಿಸಗ್ಗ—ಹಲವು ಸಭೆಗಳು ಈ ರೀತಿಯವು.

ಮಿತವ್ಯಯ—ನಮ್ಮ ತಾತ ಮುತ್ತಾತಂದಿರು ಅನುಸರಿಸಿರಬೇಕಾಗಿದ್ದ ನೀತಿ.

ಮಿತವಾದಿ— ಎರಡು ಪಕ್ಷಗಳ ಹೇಳಿಕೆಗಳನ್ನೂ ಚೆನ್ನಾಗಿ ಅರಿತಿರುವವ.

ಮಿತ್ರ—ನಮಗೆ ಸಿರಿ ಬಂದಾಗ ನಮ್ಮನ್ನು ನೆನೆವವ; ಬಂದಾಗ, ನಾವು ನೆನೆವವ;ನಗೆಗಾರನ ಹತ್ತಿರ ಮೈತ್ರಿ ಸಲ್ಲ (ಗಾದೆ).

ಮಿತ್ರಲಾಭ—ಅಧಿಕಾರ ಸಿಕ್ಕಾಗ; ಕೊಡುಗೈ ದೊರೆತಾಗ.

ಮಿಥ್ಯಮ್ಯಾಟಿಕ್ಸ್—ಮಿಥ್ಯಾಪ್ರಪಂಚದ ಲೆಕ್ಕಾಚಾರ.

ಮಿದುಚೆಂಡಿಗ—ಚೆಂಡನ್ನು ಬಿರುಸಾಗಿ ಬೀರದ ಬೌಲರ್.

ಮಿಲ್ಲು—ಮಿಲ್ಲು ಮುಚ್ಚಿಸಿ ಮಲ್ಲಿಗೆ ಅಲೆದ (ಗಾದೆ).

ಮೀನ-ಮೇಷ—ಮೀನು ತಿನ್ನಲೋ, ಮೇಷ ತಿನ್ನಲೋ, ಎಂಬ ಚರ್ಚೆ.

ಮೀಮಾಂಸ-ಉತ್ತರ ಇಂಡ್ಯದ ಬ್ರಾಹ್ಮಣರು ಇದನ್ನು ತುಂಬ ಗೌರವಿಸುವರು.

ಮೀಶಾನ್ಯ—ಮೀಶೆ ನೋಡುತ್ತಿರುವ ದಿಕ್ಕು.

ಮೀಶಾವರ—ಮೀಶೆ ಹೊತ್ತಿದ್ದರೂ, ದೇಶಾವರ ಮಾಡುವಿಕೆ.

ಮೀಶೆ—ಈಸುವಾಗ ಅನೇಕರಿಗೆ ಮೀಶೆಯೂ ಭಾರವೆನಿಸುತ್ತದಂತೆ; ಜಪಾನೀಯರು ಪ್ರಪಂಚದ ಈಜುಗಾರರ ಪೈಕಿ ಮೊದಲಿಗರೆನಿಸಿರುವುದಕ್ಕೆ ಇದೇ ಕಾರಣವಿರಬೇಕು.

ಮುಖ—ಇದನ್ನು ನೋಡಿ, ವ್ಯಕ್ತಿಯ ಅಗಲ ಗೊತ್ತು ಮಾಡಿ, ಅದಕ್ಕೆ ತಕ್ಕಂತೆ ಮಣೆಹಾಕಬಹುದಂತೆ; ಬರೀ ಶಬ್ದಪ್ರಯೋಗದಿಂದ ಇದನ್ನು ಮುರಿದು ಬಿಡಬಹುದು.

ಮುಖದೂಷಣ—ಬೆಳ್ಳುಳ್ಳಿ.

ಮುಖಮಲ್ಲು—ಪರದಾ ಹೆಂಗಸರ ಮುಖವಾಡ.

ಮುಖಸ್ತುತಿ—ಇದು ಯಾರಿಗೂ ರುಚಿಸದು....ಮತ್ತೊಬ್ಬರನ್ನು ಕುರಿತಾದರೆ. ಅದರಲ್ಲೂ, ಪತ್ನಿಯರು ಪರಸ್ತ್ರೀಯರನ್ನು ಕುರಿತ ಮುಖಸ್ತುತಿಯನ್ನೊಪ್ಪುವುದೇ ಇಲ್ಲ....ಗಣೇಶನನ್ನು ಸುಮುಖ ಎನ್ನುವಂತೆ.

ಮುಖಾಂತರ—ಪೌಡರ್ ಮುಂತಾದುವುಗಳಿಂದ ಒಂದು ಮುಖವನ್ನು ಅದಕ್ಕಿಂತ ಘೋರವಾದ ಮತ್ತೊಂದಾಗಿ ಮಾರ್ಪಡಿಸಬಹುದು.

ಮುಖಾಬೆಲೆ—ವ್ಯಕ್ತಿಯ ಸಂಬಳದ ಮೇಲೆ ಹೋಗುತ್ತದೆ.

ಮುಗ್ಗಟ್ಟು—ಏನೇ ಬರಲಿ, ಮುಗ್ಗಟ್ಟಿರಲಿ, ಎಂಬುದೇ ಹಲವು ಜನರ ನೀತಿ, ಕೂಗು.

ಮುಗ್ಗೂಟ—ಚೆಂಡಿಗನು ಉರುಳಿಸಲು, ದಾಂಡಿಗ ಉಳಿಸಲು, ಯತ್ನಿಸುವ ಮೂರು ಗೂಟಗಳು (ಕ್ರಿಕೇಟ್).

ಮುಚ್ಚಿಷ್ಟ—ಮುಚ್ಚಿರಿಸಿದ ಎಂಜಲು.

ಮುಟ್ಟಿದರೆಮುನಿ—ಮುಟ್ಟಿದರೆ ಮುನಿಯುವವನು, ಕುಟ್ಟಿದರೆ ಕಿಡಿ.

ಮುಂಡಮಂಡಲೀ—ಜರ್ಮನ್ ಯೋಧರು.

ಮುಡಿದಾವರೆ—ನಿರ್ಮಾಲ್ಯ.

ಮುದಾಹರಣೆ—ಮುದವನ್ನು ಕೊಡುವ ಸಮಂಜಸವಾದ ಉದಾಹರಣೆ.

ಮುದೋನ್ಮತ್ತ—ಸಂತೋಷದಿಂದ ಕುಣಿದಾಡುವವ.

ಮುದ್ದು—ಮುದ್ದೆಲ್ಲ ಮೂರನೆಯ ಹೆಂಡತಿಗೇನೆ (ಗಾದೆ).

ಮುದ್ದುಬೀರು—ಶೇಕಡ ೨ರಷ್ಟು ಮಾದಕವಾದ ಬೀರು.

ಮುದ್ರಾದಾರಣೆ—ಮುದ್ರಾಧಾರಣೆಗೆ ಹಲವರು ವಸೂಲು ಮಾಡುವ ದಕ್ಷಿಣೆ.

ಮುದ್ರಾಕ್ಷಾಸರ—ಮುದ್ರಾರಾಕ್ಷಸನ ಪ್ರಭಾವದಿಂದ ಅವನ ಹೆಸರನ್ನುಮುದ್ರಿಸ ಹೊರಟಾಗಲೂ ಹೀಗೆ ಬೀಳುತ್ತದೆ.

ಮುದ್ರಾರಾಕ್ಷಸ—ಕೆಲವರು ಮುದ್ರೆ ಒತ್ತುವ ರೀತಿ.

ಮುಂದುಭಿ—ಮೆರವಣಿಗೆಯ ಮುಂಭಾಗದಲ್ಲಿನ ವಾದ್ಯ.

ಮುಂದುಳಿದವ—ಜನಸಾಮಾನ್ಯರಿಗಿಂತ ಹೆಚ್ಚು ನೀತಿವಂತ, ಹಾಗೂ ಬುದ್ಧಿವಂತ.

ಮುಂದೋಳ—ಉಯ್ಯಾಲೆ ಮುಂದಕ್ಕೆ ಬಂದಾಗ; ಹಿಂದಕ್ಕೆ ಹೋದಾಗ ಹಿಂದೋಳ.

ಮುನಿ—ಕವಿಗೆ ಕವಿ ಮುನಿವಂ; ಕೆಲವು ಗಿಡಗಳು ಮುಟ್ಟಿದರೆ ಮುನಿಯುತ್ತವೆ; ಮುನಿಗಳಿಗೆ ಮುನಿಸು ಹೆಚ್ಚು.

ಮುನ್ನೋಡಿ—ಕುದುರೆ ಜೂಜಲ್ಲಿ ಮುಂದೆ ಓಡಿ ಗೆಲ್ಲುವ ಕುದುರೆ.

ನಮ್ಮಲ್ಲಿ ಪ್ರಚಾರವಾಗಿರುವುದು.

ಮಿಂಚು—ಉಚಿತವಾಗಿ ದೊರಕುವ ವಿದ್ಯುದ್ದೀಪ; ಹೊಳಪು. 'ಐವತ್ತು ವಯಸ್ಸಿಗೆ ಮಿಂಚಿದ....'

ಮಿಟಿಮಿಟಿಸಗ್ಗ—ಹಲವು ಸಭೆಗಳು ಈ ರೀತಿಯವು.

ಮಿತವ್ಯಯ—ನಮ್ಮ ತಾತ ಮುತ್ತಾತಂದಿರು ಅನುಸರಿಸಿರಬೇಕಾಗಿದ್ದ ನೀತಿ.

ಮಿತವಾದಿ— ಎರಡು ಪಕ್ಷಗಳ ಹೇಳಿಕೆಗಳನ್ನೂ ಚೆನ್ನಾಗಿ ಅರಿತಿರುವವ.

ಮಿತ್ರ—ನಮಗೆ ಸಿರಿ ಬಂದಾಗ ನಮ್ಮನ್ನು ನೆನೆವವ; ಬಂದಾಗ, ನಾವು ನೆನೆ-ವವ;ನಗೆಗಾರನ ಹತ್ತಿರ ಮೈತ್ರಿ ಸಲ್ಲ (ಗಾದೆ).

ಮಿತ್ರಲಾಭ—ಅಧಿಕಾರ ಸಿಕ್ಕಾಗ; ಕೊಡುಗೈ ದೊರೆತಾಗ.

ಮಿಥ್ಯಮ್ಯಾಟಿಕ್ಸ್—ಮಿಥ್ಯಾಪ್ರಪಂಚದ ಲೆಕ್ಕಾಚಾರ.

ಮಿದುಚೆಂಡಿಗ—ಚೆಂಡನ್ನು ಬಿರುಸಾಗಿ ಬೀರದ ಬೌಲರ್.

ಮಿಲ್ಲು—ಮಿಲ್ಲು ಮುಚ್ಚಿಸಿ ಮಲ್ಲಿಗೆ ಅಲೆದ (ಗಾದೆ).

ಮೀನ-ಮೇಷ—ಮೀನು ತಿನ್ನಲೋ, ಮೇಷ ತಿನ್ನಲೋ, ಎಂಬ ಚರ್ಚೆ.

ಮೀಮಾಂಸ-ಉತ್ತರ ಇಂಡ್ಯದ ಬ್ರಾಹ್ಮಣರು ಇದನ್ನು ತುಂಬ ಗೌರವಿಸುವರು.

ಮೀಶಾನ್ಯ—ಮೀಶೆ ನೋಡುತ್ತಿರುವ ದಿಕ್ಕು.

ಮೀಶಾವರ—ಮೀಶೆ ಹೊತ್ತಿದ್ದರೂ, ದೇಶಾವರ ಮಾಡುವಿಕೆ.

ಮೀಶೆ—ಈಸುವಾಗ ಅನೇಕರಿಗೆ ಮೀಶೆಯೂ ಭಾರವೆನಿಸುತ್ತದಂತೆ; ಜಪಾ-ನೀಯರು ಪ್ರಪಂಚದ ಈಜುಗಾರರ ಪೈಕಿ ಮೊದಲಿಗರೆನಿಸಿರುವುದಕ್ಕೆ ಇದೇ ಕಾರಣವಿರಬೇಕು.

ಮುಖ—ಇದನ್ನು ನೋಡಿ, ವ್ಯಕ್ತಿಯ ಅಗಲ ಗೊತ್ತು ಮಾಡಿ, ಅದಕ್ಕೆ ತಕ್ಕಂತೆ ಮಣೆಹಾಕಬಹುದಂತೆ; ಬರೀ ಶಬ್ದಪ್ರಯೋಗದಿಂದ ಇದನ್ನು ಮುರಿದು ಬಿಡಬಹುದು.

ಮುಖದೂಷಣ—ಬೆಳ್ಳುಳ್ಳಿ.

ಮುಖಮಲ್ಲು—ಪರದಾ ಹೆಂಗಸರ ಮುಖವಾಡ.

ಮುಖಸ್ತುತಿ—ಇದು ಯಾರಿಗೂ ರುಚಿಸದು....ಮತ್ತೊಬ್ಬರನ್ನು ಕುರಿತಾ-ದರೆ. ಅದರಲ್ಲೂ, ಪತ್ನಿಯರು ಪರಸ್ತ್ರೀಯರನ್ನು ಕುರಿತ ಮುಖಸ್ತು-ತಿಯನ್ನೊಪ್ಪುವುದೇ ಇಲ್ಲ....ಗಣೇಶನನ್ನು ಸುಮುಖ ಎನ್ನುವಂತೆ.

ಮುಖಾಂತರ—ಪೌಡರ್ ಮುಂತಾದುವುಗಳಿಂದ ಒಂದು ಮುಖವನ್ನು ಅದಕ್ಕಿಂತ ಘೋರವಾದ ಮತ್ತೊಂದಾಗಿ ಮಾರ್ಪಡಿಸಬಹುದು.
ಮುಖಾಬೆಲೆ—ವ್ಯಕ್ತಿಯ ಸಂಬಳದ ಮೇಲೆ ಹೋಗುತ್ತದೆ.
ಮುಗ್ಗಟ್ಟು—ಏನೇ ಬರಲಿ, ಮುಗ್ಗಟ್ಟಿರಲಿ, ಎಂಬುದೇ ಹಲವು ಜನರ ನೀತಿ, ಕೂಗು.
ಮುಗ್ಗೂಟ—ಚೆಂಡಿಗನು ಉರುಳಿಸಲು, ದಾಂಡಿಗ ಉಳಿಸಲು, ಯತ್ನಿಸುವ ಮೂರು ಗೂಟಗಳು (ಕ್ರಿಕೇಟ್).
ಮುಚ್ಛಿಷ್ಟ—ಮುಚ್ಚಿರಿಸಿದ ಎಂಜಲು.
ಮುಟ್ಟಿದರೆಮುನಿ—ಮುಟ್ಟಿದರೆ ಮುನಿಯುವವನು, ಕುಟ್ಟಿದರೆ ಕಿಡಿ.
ಮುಂಡಮುಂಡಲೀ—ಜರ್ಮನ್ ಯೋಧರು.
ಮುಡಿದಾವರೆ—ನಿರ್ಮಾಲ್ಯ.
ಮುದಾಹರಣೆ—ಮುದವನ್ನು ಕೊಡುವ ಸಮಂಜಸವಾದ ಉದಾಹರಣೆ.
ಮುದೋನ್ಮತ್ತ—ಸಂತೋಷದಿಂದ ಕುಣಿದಾಡುವವ.
ಮುದ್ದು—ಮುದ್ದೆಲ್ಲ ಮೂರನೆಯ ಹೆಂಡತಿಗೇನೆ (ಗಾದೆ).
ಮುದ್ದುಬೀರು—ಶೇಕಡ ೨ರಷ್ಟು ಮಾದಕವಾದ ಬೀರು.
ಮುದ್ರಾಧಾರಣೆ—ಮುದ್ರಾಧಾರಣೆಗೆ ಹಲವರು ವಸೂಲು ಮಾಡುವ ದಕ್ಷಿಣೆ.
ಮುದ್ರಾಕ್ಷಾಸರ—ಮುದ್ರಾರಾಕ್ಷಸನ ಪ್ರಭಾವದಿಂದ ಅವನ ಹೆಸರನ್ನುಮುದ್ರಿಸ ಹೊರಟಾಗಲೂ ಹೀಗೆ ಬೀಳುತ್ತದೆ.
ಮುದ್ರಾರಾಕ್ಷಸ—ಕೆಲವರು ಮುದ್ರೆ ಒತ್ತುವ ರೀತಿ.
ಮುಂದುಭಿ—ಮೆರವಣಿಗೆಯ ಮುಂಭಾಗದಲ್ಲಿನ ವಾದ್ಯ.
ಮುಂದುಳಿದವ—ಜನಸಾಮಾನ್ಯರಿಗಿಂತ ಹೆಚ್ಚು ನೀತಿವಂತ, ಹಾಗೂ ಬುದ್ಧಿವಂತ.
ಮುಂದೋಳ—ಉಯ್ಯಾಲೆ ಮುಂದಕ್ಕೆ ಬಂದಾಗ; ಹಿಂದಕ್ಕೆ ಹೋದಾಗ ಹಿಂದೋಳ.
ಮುನಿ—ಕವಿಗೆ ಕವಿ ಮುನಿವಂ; ಕೆಲವು ಗಿಡಗಳು ಮುಟ್ಟಿದರೆ ಮುನಿಯುತ್ತವೆ; ಮುನಿಗಳಿಗೆ ಮುನಿಸು ಹೆಚ್ಚು.
ಮುನ್ನೋಡಿ—ಕುದುರೆ ಜೂಜಲ್ಲಿ ಮುಂದೆ ಓಡಿ ಗೆಲ್ಲುವ ಕುದುರೆ.

ಮುನ್ನೋದಿ—ಕ್ಷಣಗ್ರಾಹಿ.
ಮುಪ್ಪು—ಚಿಂತೆ; ಮುಪ್ಪಿನ ಅನುಭವ,ಊಟಕ್ಕಿಲ್ಲದ ಉಪ್ಪಿನಕಾಯಿ(ಗಾದೆ).
ಮುಂಬೈಗಳು—ತಪ್ಪುಮಾಡುವ ಮೊದಲೇ ಸಿಗುವ ಬೈಗಳು.
ಮುಸುಕು—ಮುಸುಕಿನೊಳಗಣ ಮುದ್ದು.
ಮುಸ್ತೈದೆ—ಮುತ್ತೈದೆತನವನ್ನು ಸೂಚಿಸುವ 'ಚಾಮರ' ಇತ್ಯಾದಿ (ಮಂಗ ಳೂರು ಕಡೆ).
ಮುಷ್ಟಿಯುದ್ಧ—ಒಂದು ಮುಷ್ಟಿ ಅಕ್ಕಿಗಾಗಿ.
ಮುಳ್ಳು—ಮುಳ್ಳು ಮುಳ್ಳಿಂದಲೇ ತೆಗೆಯಲು ಬರುವುದು; ಸುಳ್ಳನ್ನು ಸುಳ್ಳಿಂ-ದಲೇ ಸಾಧಿಸಬೇಕಾಗುತ್ತದೆ.
ಮೂಕಕವಿ—ಭಾಷಣ ಮಾಡಲು ಸಾಧ್ಯವಿಲ್ಲದ್ದರಿಂದ ಕವಿತೆ ಬರೆದು ಜನರನ್ನು ಹಿಂಸಿಸಿದ ಮಹಾರಾಯ.
ಮೂಕಚಿತ್ರ—ಹಾಡುಗಳ ಹಾವಳಿಯಿಲ್ಲದ ಚಿತ್ರ; ಹೆಂಗಸರು ಬಾಯಿ ತೆರೆದರೂ ಮಾತು ಕೇಳಿಸದ ಅತ್ಯಾನಂದಕರವಾದ ಚಿತ್ರ—ಪುರುಷರಿಗೆ.
ಮೂಕಪ್ರಾಣಿ—ಗೃಹಸ್ಥ.
ಮೂಕಂ—"ಮೂಕಂ ಕರೋತಿ—ಬಾಜಾಲಂ." ಬಾಜಾಬಜಂತ್ರಿ ಬಡಿಯು ತ್ತಾನೆ, ಮೂಕನಾದರೂ ಎಂದರ್ಥ.
ಮೂರ್ಖ—ನಮ್ಮ ಅಭಿಪ್ರಾಯ ತಪ್ಪೆಂದು ವಾದಿಸುವವ.
ಮೂರ್ಖತನ—ಅಪ್ಪನ ತಪ್ಪು, ನಮ್ಮದಲ್ಲ; 'ಪಿತೃದೋಷೇಣ ಮೂರ್ಖತಾ'.
ಮೂಗರ್ಜಿ—ಹೇಡಿಯ ದ್ವೇಷಾರವ; ಕೈಲಾಗದವರ ಕುಹಕ.
ಮೂಗು—ಅನೇಕರ ನಶ್ಯದ ಡಬ್ಬಿ; ಕನ್ನಡಕ ಧರಿಸಲು ಅತ್ಯಾವಶ್ಯಕವಾದ ಅಂಗ; ಇದರ ನೇರಕ್ಕೆ ನಡೆವವರೇ ಹೆಚ್ಚು; ಧ್ಯಾನಕ್ಕೆ ಇದರ ತುದಿ ತುಂಬ ಅನುಕೂಲ; ಇದರ ಡೊಂಕನ್ನು ತಿದ್ದುವುದು ಬಲು ಕಷ್ಟ, ದೇವರಿಂದಲೂ ಅಸಾಧ್ಯ. ಉದಾ:—ಗರುಡ. ಆನೆ ಇದರ ಸಹಾಯ ದಿಂದ ನೀರು ಕುಡಿಯುತ್ತದೆ; ನಮಗೆ ಇದು ಒಂದು ಸಂಗೀತೋಪಕರಣ ನೆಗಡಿಯ ನೆಲೆವೀಡು.
ಮೂಗುತಿ—ಇದು ಮೂಗಿಗಿಂತ ಭಾರವಾಗಿರಕೂಡದೆಂಬ ನಿಯಮವಿದೆ.
ಮೂಗುದ್ದಾರ—ಪೆನ್ಷನ್, ಪ್ರಾವಿಡೆಂಟ್ ಫಂಡ್ ಮುಂತಾದ ಪದ್ಧತಿಗಳು.

ಮೂಢ—ಮಾಡಿ ಮಾಡಿ, ಮೂಢನಾದೆ (ಜೀವನ ಚರಿತ್ರೆ).

ಮೂಢನಿದ್ರೆ—ಮುಂದೆ ಕಾದಿರುವ ವಿಪತ್ತನ್ನರಿಯದೆ ನಿದ್ದೆ ಮಾಡುವುದು, ಎದ್ದು ಚಾಕರಿಗೆ ಹೋಗುವುದೇ ಅನೇಕರಿಗೆ ಆ ವಿಪತ್ತು.

ಮೂತಿ—ಅತಿ ಮೀಸೆ ಮೂತಿ ಕೆಡಿಸುತ್ತದೆ; ತುಂಬ ಬೇಜಾರಾದಾಗ ಇದನ್ನು ಉದ್ದ ಮಾಡಬಹುದು.

ಮೂರ್ತಿ—ಮೂರ್ತಿ ಸಣ್ಣದಾದರೂ, ಪೂರ್ತಿ ಸೀಟೇ ಬೇಕಂತೆ; ಮೂರ್ತಿ ಚಿಕ್ಕದಾದರೂ, ಪೂರ್ತಿ ಕಟ್ಟಿಲ್ಲ.

ಮೂಲವ್ಯಾಧಿ—ಹಸಿವು.

ಮೂಲೆ—ಬಿಳಿಯರ ರಾಜ್ಯದಲ್ಲಿ ಬಣ್ಣದವರ ಸ್ಥಾನ.

ಮೂಲೆವ್ಯಾಧಿ—ನೀಚ್ಯಾನುಸಂಧಾನ ಎಂದು ಇದನ್ನೇ ಕರೆಯುವರು; ಯಾವಾಗಲೂ ಮೂಲೆಯಲ್ಲೇ ಮುದುರಿ ಕೂಡುವ ಸ್ವಭಾವ.

ಮೂಸೆ—ರಾಜಕೀಯ ಪಕ್ಷ; ತತ್ವಪ್ರಚಾರ, ಅಧಿಕಾರವಿಕರಣ ಇವುಗಳಿಂದ ಅನುಯಾಯಿಗಳ ಅಭಿಪ್ರಾಯಗಳನ್ನು ತಿದ್ದಿ ಸ್ಥಿರಪಡಿಸುವುದು.

ಮೃಗ—ತನಗೆ ಅಂದಂದಿಗೆ ಬೇಕಾದ್ದಕ್ಕಿಂತ ಹೆಚ್ಚಾಗಿ ಸೇರಿಸಿ, ಅದನ್ನು ಇತರರಿಗೆ ಸಾಲ ಕೊಟ್ಟು ಬಡ್ಡಿ ವಸೂಲು ಮಾಡಲರಿಯದ ಕೀಳು ತರದ ಪ್ರಾಣಿ; ಸ್ವಜಾತಿಯವರನ್ನು ಕೊಲ್ಲಲು ಉಪಾಯ, ಪಿತೂರಿಗಳನ್ನು ಹೂಡದ ಪ್ರಾಣಿ.

ಮೃಗಯಾವಿಹಾರ—ಅಮೇರಿಕದ ಇಲೆಕ್ಷನ್; ಆನೆ, ಕತ್ತೆ ಎಂಬ ಎರಡು ಪ್ರತ್ಯೇಕ ಸಂಕೇತಗಳನ್ನಿಟ್ಟುಕೊಂಡಿರುವ ರಿಪಬ್ಲಿಕ್, ಡೆಮೋಕ್ರಾಟಿಕ್ ಪಕ್ಷಗಳ ನಾಯಕರ ಇಲೆಕ್ಷನ್ ಮೇಲಾಟ.

ಮೃತ್ಯು—ಮೃತ್ಯುಂಜಯ ಎಂದು ಹೆಸರಿಟ್ಟು, ಆ ಮಗುವನ್ನು ಮುದ್ದಾಗಿ ಕರೆಯುವ ರೀತಿ.

ಮೆಚ್ಚಿಗೆ—ನಮ್ಮ ವಿಷಯವಾಗಿ ನಮಗಿರುವ ಅಭಿಪ್ರಾಯ; ನಮ್ಮಂತೆಯೇ ಮತ್ತೊಬ್ಬರೂ ಯೋಚನೆಮಾಡಿದಾಗ, ಅವರಲ್ಲಿ ನಮಗಾಗುವ ಭಾವ.

ಮೆಡು—ಇದನ್ನು ಮತ್ತೊಬ್ಬರ ಎದೆಗೆ ಚುಚ್ಚಿದಾಗ, ನಮ್ಮ ಎದೆ ಚುರ್ರೆನ್ನುತ್ತದೆ.

ಮೆಳ್ಳೆಗಣ್ಣ—ಇಂಥವರು ಅತ್ತರೆ, ಕಣ್ಣೀರು 'ಬೆನ್ನಮೇಲ್ ತೊಟ್ಟಿಕ್ಕುಂ'.

ಮೇಗಾಡಂಬರ—ಹೊರ ಚೆಲುವು.

ಮೇಗಾಡೊಂಬರ—ಸರ್ಕಸ್‌ನಲ್ಲಿ ಮೇಲುಗಡೆ ಕುಣಿದು ನೆಗೆಯುವವ.

ಮೇದನಿ—ಮೇಲುದನಿ.
ಮೇಧಾವಿ—ಮೇಲುಮೇಲಕ್ಕೆ ಧಾವಿಸುವವನು. 'ಕೀಧಾವಿ'ಯನ್ನು ನೋಡಿ.
ಮೇಯರ್—ಮೇಯುವುದಿಲ್ಲ, ಅವರು.
ಮೇಲೀಸು—ಮೇಲಿನವರಿಗೆ ಮಾಡಬೇಕಾಗಿ ಬರುವ ಮಾಲೀಸು.
ಮೇಲು—ಕವಿಕುಲದ ಮೇಲುಗಳೇ, ಎಂದು ಪುರುಷಕವಿಗಳನ್ನು ಸರ್ವಜ್ಞನು ಸಂಬೋಧಿಸಿರುವನು.
ಮೇಸ್ತ್ರೀ—ಮೇಷ್ಟ್ರು ಮೇಸ್ತ್ರೀ ಎರಡೂ ಸ್ತ್ರೀಲಿಂಗವೆಂದೇ ತೋರುವುದು.
ಮೇಘಸ್ನಾನ—ಛತ್ರಿ ಇಲ್ಲದಾಗ, ಬಲವಂತ ಮೇಘಸ್ನಾನ.
ಮೇಳವಾದ್ಯ—ಒಬ್ಬೊಬ್ಬರೇ ವಾದ್ಯ ಬಾರಿಸಿದರೆ ಅಪಾಯ ಎಂದು ತಿಳಿದು, ಒಟ್ಟಾಗಿ ಗುಂಪು ಸೇರಿ ಮಾಡುವ ದೊಂಬಿಗೀತ.
ಮ್ಲೇಚ್ಛ—ನಮ್ಮ ದೇವರಿಗೆ ಬೇರೊಂದು ನಾಮ ಹಚ್ಚುವವ.
ಮ್ಲೇಚ್ಛಭಾಷೆ—ವಿದುರ ಪಾಂಡವರೊಂದಿಗೆ ಆಡಿದ ಭಾಷೆ.
ಮೈಥುನಾಲಜಿ—'ಮೈಥಾಲಜಿ'ಯಲ್ಲಿ ಇದೇ ಮುಖ್ಯ.
ಮೈಮನಸ್ಯ—ಮೈಗೂ ಮನಸ್ಸಿಗೂ ಸಂಕಟ.
ಮೈರಾವಣ—ಮಹಾದಪ್ಪ ರಾವಣ.
ಮೊಣಕಾಲು—ಮಂಡೆ ಇರುವಾಗಲೇ ಹಲವರು ಮೊಣಕಾಲಿಗೆ ಪಟ್ಟಿ ಕಟ್ಟುತ್ತಾರೆ; ಪಾಪಿ ಪಣ ತೊಟ್ಟರೆ, ಕುದುರೆಯ ಮೊಣಕಾಲು ಮುರಿಯಿತು (ಗಾದೆ).
ಮೊಲ್ಲೆಗ—ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮೊಲ್ಲೆ ಸುತ್ತಿರುವ ಆಶಾವಾದಿ.
ಮೊಳ—ಕೆಲವು ಅಂಗಡಿಗಳಲ್ಲಿ ಮೋಟುಗೈಯವರನ್ನೇ ಆರಿಸಿ ನೇಮಿಸಿರುತ್ತಾರೆ; ಸಂಜೆ ಹೊತ್ತಿಗೆ ಎರಡೂವರೆ ಮೊಳ ನೆಯ್ದು, ಕತ್ತಲೆಯಲ್ಲಿ ಅದನ್ನೇ ಮೂರು ಮೊಳ ಅಂತ ಅಳೆದು ಮೋಸಮಾಡುವುದು.
ಮೊಳಕಾಲು—ಕುಳ್ಳನ ಕಾಲ ಸ್ಥಿತಿ.
ಮೋಚಿ—ವಂಡಾರ ಕಂಬಳ, ಬಸರೂರ ಜಪ್ಪಳ, ಕೋಟೇಶ್ವರದ ಕೊಟೇಹಬ್ಬ, ಇವು ಮೂರನ್ನೂ ಕಂಡವ, ಮೋಚ.
ಮೋಜಸ್ಸೀ—ಮೋಜು ಮಾಡುವವ.

ಮೋಟರು—ಪಾದಚಾರಿಗಳ ಚುರುಕಿಗೆ ಇದೇ ಮುಖ್ಯ ಕಾರಣ.

ಮೋಸ—ಇತರರಿಗೆ ನಾವು ಮಾಡಿದರೆ, ಜಾಣತನ; ಅವರು ನಮಗೆ ಮಾಡಿದರೆ, ದ್ರೋಹ; ಪತ್ತೆಯಾದರೆ ಪೆಚ್ಚು, ಪತ್ತೆಯಾಗದಿದ್ದರೆ, ಕೆಚ್ಚು; ದುರ್ಭಿಕ್ಷದಲ್ಲಿ ಅಧಿಕ ಮೋಸ.

ಮೋಸಗಾರ—ನಾವು ಮುಳುಗಿರುವಾಗ, ನಮಗೆ ಕೈ ಕೊಡುವವ.

ಮೋಸಭವಿಷ್ಯ—ಜನಪ್ರಿಯವಾಗಲು ಪ್ರತಿಕೆಗಳು ತುಂಬ ಶ್ರಮವಹಿಸಿ ಅಚ್ಚುಮಾಡುವ ಭವಿಷ್ಯ-ಭಾಗ.

ಮೋಕ್ಷ—ರಿಟೈರಾಗುವಿಕೆ; ದಾಂಪತ್ಯವಿಚ್ಛೇದನ.

ಮೌಢ್ಯ—ಇತರರ ಮೆದುಳಿಗೆ ಹಿಡಿದಿರುವ ರೋಗ; ಸುಖಪಡಬೇಕೆಂಬ ಬಯಕೆ.

ಮೌನಂ—ಬುದ್ಧಿವಂತರ ಕವಚ; ಮೌನಂ ಸರ್ವಾರ್ಥಸಾಧನಂ; ಬಾಯಿ ಬಿಟ್ಟರೆ ಬಡಿದಾಡುವ ಜನ ಇದನ್ನನುಸರಿಸಿದರೊಳ್ಳಿತು; "ಮೌನಂ ಮುಂಡಿತಲಕ್ಷಣಂ".

ಮೌನಿ—ಮಾತಿನ ಬೆಲೆಯನ್ನರಿತಿರುವ ಬುದ್ಧಿವಂತ.

## ಯ

ಯಜಮಾನ—ಆಳುಗಳ ಕೈಗೊಂಬೆ.

ಯಜ್ಞಪಶು—ಸಾಮಾನ್ಯ ಮನುಷ್ಯ.

ಯತ್ನಗಂಬಳಿ—ಪ್ರಯಾಸದಿಂದ ತಯಾರಿಸಿದ ಕಂಬಳಿ.

ಯತ್ವವತ್ವ—ಸಂಸ್ಕೃತಕ್ಕೆ ಯತ್ವವತ್ವದೊಳ್ ಬಹುಳತೆ ತಾನ್ ಎಂದುಮಿಲ್ಲ.

ಯಂತ್ರಪಿಶಾಚಿ—ಆಧುನಿಕ ನಾಗರಿಕತೆಯನ್ನು ಮೆಟ್ಟಿಕೊಂಡಿರುವ ಭೂತ.

ಯತಿ—'ಪಾಪಿ'ಯ ಪುನರ್ಮುದ್ರಿತ ಪ್ರತಿ.

ಯಥಾರಾಜಾ—ಯಥಾರಾಜಾ ತಥಾಮಜಾ.

ಯಥಾಸ್ಥಿತಿ—ಪುನರಪಿ ಜಗಳಂ, ಪುನರಪಿ ಮರಣಂ.

ಯದ್ವಾತದ್ವಾ—ಒಂದು ಪಕ್ಷ ಅಧಿಕಾರಕ್ಕೆ ಬಂದಾಗ ಯದ್ವಾ; ಮತ್ತೊಂದು ಪಕ್ಷ ಅದರ ಸ್ಥಾನಕ್ಕೆ ಬಂದಾಗ, ತದ್ವಾ.

ಯಮ—ಅತ್ಯಂತ ಬಾಧಿ ಅಮಾನುಷ 'ಕಾನ್‌ಸೆಂಟ್ರೇಷನ್ ಕ್ಯಾಂಪ್' ಎಂಬ

ಹಿಂಸಾಗಾರದ ಸಂಚಾಲಕ; ಕರಿವ ಕಾದೆಣ್ಣೆಯೊಳ್ ಇರಿವ, ಬೆನ್ನೊಳ್ ಕರುಳ ಹೆರೆವ, ಬಾಯೊಳಗಲಗ ಸರಿವ, ಕರಗಸದಿಂ ಕೊರೆವ, ಕೆಯ್ ಕಾಲ್ಗಳ ಮುರಿವ, ಕೆಂಗೆಂಡದೊಳು ಹುರಿವ—ಧರ್ಮಮೂರ್ತಿ; ಆತ್ಮನಯಮಂ ಯಮಮಿತ್ಯಾಹುರಾತ್ಮವೈ ಯಮ ಉಚ್ಯತೇ.

ಯವಕ್ರೀತ—ಅಧ್ಯಯನ ಮಾಡದೆಯೇ ವಿದ್ಯೆಗಳಿಸಬೇಕೆಂದು ಹವಣಿಸಿದ ಪ್ರಾಚೀನ ಭಾರತದ ನವ ತರುಣ.

ಯವಸಾಯ—ಯವನ ವ್ಯವಸಾಯ; ರೈತರ ವ್ಯವಸಾಯ.

ಯುಗಾದಿ—ವರ್ಷಕ್ಕೊಮ್ಮೆ ಬರುವ, ಒಮ್ಮೆ ಬಂದರೆ ಸಾಕೆನಿಸುವ ಹಬ್ಬ; ಉಂಡಿದ್ದೇ ಯುಗಾದಿ ಎಂದು ಹೇಳುವವರೇ ಹೆಚ್ಚು; "ಎಲ್ಲಿದೆ ಯುಗಾದಿ ? ಎಲ್ಲವೂ ಯುಗಾಂತ" (ಮುಗುಳಿ).

ಯುದ್ಧ—ಶಾಂತಿ ನೆಲೆಸಿದಾಗ ನಾವು ಅನುಸರಿಸುವ ನೀತಿಯ ಫಲ; ಮಾನವ ಕುಲದ ಒಡಹುಟ್ಟು.

ಯುವಕ—ನಮ್ಮಷ್ಟು ವಯಸ್ಸಿನವ.

ಯೂನೋ—ಒಗ್ಗಟ್ಟಿಗಿಂತ ಮುಗ್ಗಟ್ಟೇ ಜಾಸ್ತಿ; ಬೀದೀಲಿ ಹೋಗೋ ಮಾರಿಗಳನ್ನೆಲ್ಲ ಒಂದು ಮನೆಯೊಳಕ್ಕೆ ಸೇರಿಸುವ ಸಂಸ್ಥೆ.

ಯೋಚನೆ—ಯೋಚನೆ ಮಾಡಿದರೆ, ಯಾಚನೆಯೇ ಮೇಲೆನಿಸುತ್ತದೆ.

ಯೋಜನೆ—ಯೋಚನೆಗೂ ಯೋಜನೆಗೂ ಯಾವಾಗಲೂ ಯೋಜನದ ದೂರ (ಗಾದೆ).

ಯೌವನ—ಸಂತೋಷವೇ ಯೌವನ, ಅಂದಮೇಲೆ, ಯೌವನ ಎಲ್ಲಿ ಬಂತು?

## ರ

ರ—ಅಸು ನೀಗಿದ ಅಸುರ.

ರಕ್ತಪುಡಿ—ಪ್ಲಾಸ್ಮದ ಪುಡಿ.

ರಗಳೆ—ಕನ್ನಡ ಕವಿಗಳು ಹಲವರ ಧಾಟಿ.

ರಂಗಭೂಮಿ—ಇದನ್ನು ಪರಿಶುದ್ಧ ಮಾಡಬೇಕೆನ್ನುವವರು ಇಲ್ಲಿಗೆ ಹೋಗುವುದೇ ಇಲ್ಲ; ಭೂಮಿ ಗುಂಡಾಗಿರುವುದರಿಂದ ಇಲ್ಲಿ ಉರುಳುವವರು ಹೆಚ್ಚು; ಅನೇಕರ ರಂಗು ಬಯಲಾಗುವುದು ಇಲ್ಲೇ.

ರಂಗಮಂಗ—ಹನುಮಂತನ ಪಾರ್ಟುಮಾಡಿ ಹೆಸರು ಪಡೆದವ.
ರಂಗಶಾಯಿ—ರಕ್ತವನ್ನು ತೋರಿಸಲು ರಂಗಭೂಮಿಯಲ್ಲಿ ನಟರು ಉಪ-
ಯೋಗಿಸುವ ಶಾಯಿ.
ರಂಗಸ್ಥಳ—ಪ್ರಖ್ಯಾತ ನಟರು ಹಲವರು ದಿನವೂ ಹಣಸಂಪಾದನೆಗಾಗಿ ಸತ್ತು
ಸತ್ತು ಒದ್ದಾಡುವ ಸ್ಥಳ.
ರಂಗೋಲಿ—ಅತೀ ಜಾಣರು ಇದರ ಕೆಳಗಿಂದಲೂ ತೂರುತ್ತಾರೆ.
ರಜದಮಹೋತ್ಸವ—ಶಾಲಾ ಹುಡುಗರಿಗೆ.
ರಟ್ಟೆ—ಹೊಟ್ಟೆಯೊಳಗಣ ಸಿಟ್ಟು ರಟ್ಟೆಯ ಮೇಲಕ್ಕೆ ಬರಬಾರದಂತೆ.
ರಂಡಾಶ್ರಮಿ—೪೦ನೇ ವಯಸ್ಸಾದ ಮೇಲೆ, ಹೆಂಡತಿಯನ್ನು ಕಳೆದುಕೊಂಡವ.
ರಣರಂಗ—ಟಗರು ಪಂಥವೊ, ಸಭೆಯ ರಗಳೆಯೊ, ಕುಸ್ತಿಯೊ ಸೊಗಜನಕೆ
ರಣರಂಗ (ಮಂಕುತಿಮ್ಮ).
ರಣವಾದ್ಯ—ಹಾರ್ಮೋನಿಯಂ ಎಂಬ ಪೆಟ್ಟಿಗೆ ವಾದ್ಯ.
ರಣಾಶ್ವ—ತುಂಬ ಜನಪ್ರಿಯನಾದ ನಾಯಕ (ಆಂಗ್ಲ).
ರವಕಾಯರ್—ರವೆಯಿಂದ ಬೆಳೆಸಿದ ಕಾಯದವರು, ಮಹರ್ಷಿಗಳು, ಇತ್ಯಾದಿ,
ಎಂದು ತೋರುತ್ತದೆ. 'ವಸಿಷ್ಠ ನಾರದನ್ ಅತ್ರಿ ಕಪಿಲಂ ಕ್ರಮದಿ
ರವಕಾಯರ್ ಅಕ್ಕುಂ'.
ರವೀಂದ್ರ—ರವಿ ಕಾಣದ್ದನ್ನು ಕವಿ ಕಂಡ; ಆದರೆ ರವೀಂದ್ರ ಕಂಡದನ್ನು
ಕವೀಂದ್ರ ಹಾಡಿದ.
ರವೆ—ಗಾಯಕರ ಗಾಯನ ಶೋಭಿಸಬೇಕಾದರೆ, ರವೆ ಅತ್ಯಗತ್ಯ, ಎಂದು
ಅರವದವರು ಹೇಳುತ್ತಾರೆ.
ರಷ್ಯರಾಗ—ಕೆಂಪು.
ರಸಭಸ್ಮ—ಹಲವು ಗ್ರಂಥಗಳು ಎಲ್ಲ ರಸಗಳನ್ನೂ ಭಸ್ಮಗೊಳಿಸಿರುತ್ತವೆ.
ರಸ್ತೆ—ಜಾಹಿರಾತುಗಳನ್ನು ಎರಡು ಪಾರ್ಶ್ವಗಳಲ್ಲೂ ಅಂಟಿಸಿ, ಅವುಗಳ
ನಡುವೆ ಜನರನ್ನು ಓಡಾಡಿಸಿ ಪ್ರಚಾರಪಡಿಸಲು ಒದಗುವ ಮಾರ್ಗ.
ರಕ್ಷೆ—ರಕ್ಷ ರಕ್ಷ ಎಂದು ಹೇಳಿದವರನ್ನೆಲ್ಲಾ ರಾಕ್ಷಸರೆಂದು ಬೈದು ಹತ
ಮಾಡುವರು, ಈಗಲೂ.
ರಾಕ್ಷಸರು—ನಾಟಕದಲ್ಲಿ ರಾಕ್ಷಸನ ಪಾರ್ಟು ಚೆನ್ನಾಗಿಲ್ಲ ಎಂದು ಗಲಾಟೆ

ಎಬ್ಬಿಸಿ ಕಾಸು ಹಿಂದಕ್ಕೆ ಕೇಳುವ ಪ್ರೇಕ್ಷಕರು.

ರಾಗ—ಪುಣ್ಯವಂತ ಹಾಡಿದ್ದೇ ರಾಗ, ಪಕ್ಕವಾದ್ಯದವನು ಹಿಡಿದದ್ದೇ ತಾಳ.

ರಾಗದ್ವೇಷ—ಕೆಲವರು ರಾಗಾಲಾಪನೆ ಮೊದಲು ಮಾಡಿದರೆ ನಮಗಾಗುವ ಕೋಪ.

ರಾಗಿ—ಯಾರಿಗೆ ರಾಜ್ಯ ಬಂದರೂ, ಇದನ್ನು ಬೀಸುವುದು ತಪ್ಪಬೇಕಾದರೆ, ಊರಿಗೆ ಮೆಷೀನ್ ಬರಬೇಕು. ಭಾಗ್ಯವಂತರಾಗಿ, ಎಂದು ಒಮ್ಮೆ ಪುರಂದರದಾಸರು ಅನುಗ್ರಹಿಸಿದ್ದುಂಟು.

ರಾಜಕಾರಣಪಟು— ರಾಜಕೀಯ ಅನಾಹುತಗಳಿಗೆಲ್ಲ ಏನು ಕಾರಣ, ಯಾರು ಕಾರಣ ಎಂಬುದನ್ನು ಬಲ್ಲವ.

ರಾಜಕಾರಣವಟು—ರಾಜಕೀಯ ಕ್ಷೇತ್ರದಲ್ಲಿ ಈಗತಾನೆ ಧುಮ್ಮಿಕ್ಕಿರುವವ.

ರಾಜತಂತ್ರ—ಹತ್ತು ಜನರ ಸೇವೆಯನ್ನು ನಮ್ಮದೆಂದೇ ಭಾವಿಸಿ ಮಾಡುವಿಕೆ.

ರಾದ್ಧಾಂತ—ಇದಿಲ್ಲದೆ ಸಿದ್ಧಾಂತಕ್ಕೆ ಬರುವ ಹಾಗೆಯೇ ಇಲ್ಲ; ಅಥವಾ ಬಂದರೂ, ಇದು ಸಿದ್ಧ.

ರಾಭಣ—ರಾವಣನ ಹೆಸರಲ್ಲೂ ಭಕಾರವಿರಬೇಕೆಂಬುದು ಹಲವರು ಕವಿಗಳ ಅಭಿಮತ.

ರಾಮರಸ—ಅಭಿನವ ಮಂಗನ ತಂದೆ.

ರಾಮಾಣ್ಯ—ಹಲವರು ರಾಮಾಯಣವನ್ನು ವ್ಯಾಖ್ಯಾನ ಮಾಡಿ ಈ ಗತಿಗಿಳಿಸಿಬಿಟ್ಟಿದ್ದಾರೆ.

ರಾರಾಜಿಸು—ರಾ ರಾ ಎಂದು ಎಲ್ಲರನ್ನೂ ಆಕರ್ಷಿಸಿ ಕರೆಯುವಿಕೆ.

ರಾವಣ—ರಾವಣನ ಹೊಟ್ಟೆಗೆ ಆರು ಮಣ ಬೂರುಗ.

ರಾವುತ್ತ—ಭಗಿನೀಪತಿ.

ರಾಷಾಣಹೃದಯ—ರೇಷನ್ ಡಿಪೋದವನ ಕಲ್ಮನಸ್ಸು.

ರಿಸೀವರ್—ಉಳಿದಿದ್ದನ್ನು ಗಳಿಸುವವ.

ರಿಕ್ಷ— ಅಂತರಿಕ್ಷದ ಕೊನೆಯಲ್ಲಿ ಕಾಣುವುದು.

ರು—ಬಹುಮಾನಸೂಚಕ; ರು ಹೊಡೆಯುವುದೆಂದರೆ, ಬಹುಮಾನಿಸುವ ತಂತ್ರ ಹೂಡುವುದು.

ರುಚಿ— ಹೊಸ ಸಂಸಾರ ಹೂಡಿದ ಎರಡು ತಿಂಗಳಲ್ಲೇ ನಾವು ಕಂಡು ಹಿಡಿಯ-

ಲಾರದೆ ಹೋಗುವ ವಸ್ತು.

ರುಮಾಲು—ಬಟ್ಟತಲೆಗೆ ಬೇಕಾದ ಮುಸುಕು.

ರೂಪ್ಯವತಿ—ಭಾರ್ಯಾ ರೂಪವತೀ ಶತ್ರು.

ರೂಲಕ್ಕೇರಿಸುವುದು—ರೂಲನ್ನು ಉಲ್ಲಂಘಿಸಿದ್ದಕ್ಕಾಗಿ ಶಿಕ್ಷಿಸುವುದು.

ರೂಲು—ಬಡಪಾಯಿಗಳನ್ನು ತಡೆಯಲು ಕಟ್ಟಿರುವ ಮುಳ್ಳು ಬೇಲಿ; ಶ್ರೀಮಂತರು ಲಾಯರುಗಳ ಮೂಲಕ ಅದನ್ನು ಸಾಮಾನ್ಯವಾಗಿ ದಾಟಬಹುದು.

ರೂಲುದೊಣ್ಣೆ—ನಿರ್ದಾಕ್ಷಿಣ್ಯವಾಗಿ ಇತಿಮಿತಿಯಲ್ಲಿರಿಸುವ ರೂಲು.

ರೇ—ಸತ್ತರೇಂ, ಪುಟ್ಟರೇ ?—ಎಂಬ ಪ್ರಶ್ನೆಗೆ, ಪುಟ್ಟಜನ ಸತ್ತರೆ, ಪುಟ್ಟ ರೆ ದೊಡ್ಡವರು ಸತ್ತರೆ ದೊಡ್ಡ ರೆ, ಎಂಬುದೇ ಉತ್ತರ.

ರೇಡಿಯೋ—ರೇಡಿಯೊ ಭಾಷಣ ಕೇಳಿದರೆ, ರೇಡಿಯೊ ಸಂಗೀತವೇ ಚೆನ್ನು ಅನ್ನಿಸುತ್ತದೆ; ರೇಡಿಯೋ ಸಂಗೀತ ಕೇಳಿದರೆ, ರೇಡಿಯೋ ಭಾಷಣವೇ ಚೆನ್ನು ಅನ್ನಿಸುತ್ತದೆ; 'ಗುಂಡಿಗೆ ಇದ್ದವ ಗುಂಡಿ ತಿರುಗಿಸಲಿ' (ಗಾದೆ); ತಮ್ಮ ಭಾಷಣ, ಗಾಯನ ಇವುಗಳನ್ನು ಯಾರೂ ಕೇಳುತ್ತಿಲ್ಲ ಎಂಬ ಧೈರ್ಯವನ್ನು ಜನರಿಗೆ ಕೊಡಲು ಅನುಕೂಲಿಸುವ ಏರ್ಪಾಟು.

ರೇಗು—ನಮ್ಮ ಇಚ್ಛೆಯಂತೆ ಇತರರು ನಡೆಯದಿದ್ದಾಗ ನಮಗಾಗುವ ಭಾವ-ವಿಶೇಷ.

ರೇಷ್ಮೆ—ಲಕ್ಷಾಂತರ ಹುಳಗಳನ್ನು ಸಾಯಿಸಿ ನೂತು ನೆಯ್ದುದ್ದರಿಂದ ರೇಷ್ಮೆ ಮಗುಟ ಮಡಿಯಂತೆ.

ರೈತರು—ಬೇಸಾಯವನ್ನು ತೊರೆದು ಪಟ್ಟಣಗಳನ್ನು ಸೇರಿ ಕೆಡುತ್ತಿರುವ ಜನಸ್ತೋಮ.

ರೊಕ್ಕಭೋಜನ—ಹೋಟಲೂಟ.

ರೊಟ್ಟಿ—ರೊಟ್ಟಿ ಜಾರಿ ತುಪ್ಪಕ್ಕೆ ಬಿದ್ದಾಗ, ಅವೆರಡೂ ಜಾರಿ ಹೊಟ್ಟೆಗೆ ಬೀಳುವುದೇ ಚೆನ್ನು; ರೊಟ್ಟಿ ಬೇಕಾದರೆ ರಟ್ಟೆ ಮುರಿಯಬೇಕು.

ರೋಗ—ವೈದ್ಯ ಹೇಳಿದ್ದೇ ರೋಗ.

ರೋಗಕ್ಷೇಮ—ಖಾಯಿಲೆ ಬಿದ್ದು ನಂಟರಿಷ್ಟರಿಂದ ಉಪಚರಿಸಿಕೊಳ್ಳುವುದರಲ್ಲೇ ಸುಖಕಾಣುವ ಸ್ವಾರ್ಥಿಯ ಸ್ಥಿತಿ (ಪರ್ವತವಾಣಿ).

ರೋಗಾಸನ—ಹಾಸಿಗೆ.

ರೋಗಿ—ವೈದ್ಯರನ್ನು ಬದುಕಿಸುವ ಮಹಾತ್ಮ.
ರೋಡಾಡಿ—ನಾಲ್ಕಾರುಕಡೆ ತಿರುಗಿ ಕಂಡ ಜನರನ್ನು ಲೇವಡಿಮಾಡುವ ಹಾಸ್ಯಗಾರ.
ರೋಮಾಂಚ ಕಂಚುಕಿತ—ಬಡವ.
ರೋರರ್—ಜೋಗಿನ ರೋರರಿನ ಸರಿಸದಲಿ ನಲ್ಲಿಯ ನೀರು ಸುರಿದಂತೆ (ಪು. ಸರಸ್ವತಿ).

## ಲ

ಲಕುಮಿ—ಲಕ್‌ಗೆ ಅಧಿದೇವತೆ.
ಲಕ್ಕಿಲಿ—ಕರಿ ಬಿಳಿ ಹೂವುಗಳನ್ನುಳ್ಳ ಗಿಡ ; ಅದೇ ಅದರ ಭಾಗ್ಯ.
ಲಕ್ಕೋಟಿ—ಬಿಲ್ಲುಗಳನ್ನಿಡುವ ಬತ್ತಳಿಕೆ.
ಲಂಗ—ಕಾಲಸ್ಥಿತಿಯನ್ನು ತಿಳಿಸುವ ಒಂದು ಉಪಕರಣ.
ಲಂಗಲಗಾಮು—ಹೆಣ್ಣಿನ ಹತೋಟಿ.
ಲಂಗೋಟಿ—ಬಡವರ ಆಧಾರ, ಮಠದಯ್ಯಗಳ ಮಿತ್ರ, ಮಡಿವಾಳನ ಶತ್ರು, ಬೈರಾಗಿಗಳ ಭಾಗ್ಯ.
ಲಂಗೋಟಿ ಸ್ನೇಹಿತ—ಒಂದೇ ಬೀದಿಯ ಮರಳಲ್ಲಿ ಹೊರಳಾಡಿದ ಇಬ್ಬರು.
ಲಘುವಂಶ—ಕಳಪೆ ಕುಲ.
ಲಘುಕುಲೋದ್ಭವ—ಅಂಥ ಕುಲದವನು.
ಲಂಚ—ಬೇರು ನೀರುಂಡಾಗ ತಣಿಯವೆ ಭೂರುಹದ ಶಾಖೋಪಶಾಖೆಗಳು? ಎಂಬ ಪ್ರಶ್ನೆ ಲಂಚಕ್ಕೆ ಅನ್ವಯಿಸುತ್ತದೆ ; ಫಲಾಪೇಕ್ಷೆಯಿಂದ ಮಾಡಿದ ತ್ಯಾಗ ; ಗುಪ್ತದಾನ ; ಲಂಚಂ ವಿನಾ ನ ಶೋಭಂತೆ ಗುಮಾಸ್ತಸ್ಯ ಕರಂ, ಭುವಿ ; ತೆರೆದ ಹಸ್ತವೇ ಲೇಸು, ಎಂದು ಸರ್ವಜ್ಞನೂ ಹೇಳುತ್ತಾನೆ.
ಲಂಚಬಾಣ—ಇದನ್ನು ಎದುರಿಸುವ ಎದೆಗಾರರು ಅತಿ ವಿರಳ.
ಲಂಚಾಮೃತ—ಒಂದು ಬಗೆಯ ವಿಷ.
ಲಜ್ಜೆ—ಸಂಚಾರೀ ಭಾವಗಳಲ್ಲಿ ಇದೂ ಒಂದು ; ಮನೆಯಲ್ಲಿ, ಅದಕ್ಕೋಸ್ಕರವೇ, ಇದು, ಕಡಮೆ.
ಲಡ್ಡು—ಧಾರವಾಡದ ಕಡೆ ಜೊಳ್ಳು.

ಲಬೋಮಂಡಲ—ಗೋಳುಲೋಕ.

ಲಲ್ಲೆ—ಬಲ್ಲವನೇ ಬಲ್ಲ ಲಲ್ಲೆಯ ಸವಿಯ (ಗಾದೆ).

ಲವಣ—ಒಬ್ಬಳು ಪಂಡಿತಪುತ್ರಿಯ ಅಭಿಪ್ರಾಯದಂತೆ, ಇದಕ್ಕೆ ಎಮ್ಮೆ ಸಗಣಿ ಎಂಬ ಅರ್ಥವಿದೆ.

ಲವಣಾಸ್ತ್ರ—ಬ್ರಿಟಿಷ್ ಸಾಮ್ರಾಜ್ಯದ ಮೇಲೆ ಗಾಂಧೀಜಿಯವರು ಹೂಡಿದ ಒಂದು ಅಸ್ತ್ರ.

ಲವರವಿಕೆ—ಸಣ್ಣ ಕುಪ್ಪಸ.

ಲಾಗ—ನಿರಾಶನಾದ ರಾಜಕೀಯ ನಾಯಕನ ಚರ್ಯೆ ; ದೊಂಬ ಜಾರಿದ್ದೂ ಒಂದು ಲಾಗ.

ಲಾಗಭೂಷಣ—ಅಂಥ ಲಾಗದಿಂದ ಪಡೆದ ಬಿರುದು.

ಲಾಗಾಡಂಬರ—ಲಾಗ ಹಾಕಿ ಮೆರೆಯುವುದು.

ಲಾಗಾನಂದ—ಲಾಗದಲ್ಲೇ ಆನಂದಪಡುವ ವ್ಯಕ್ತಿ.

ಲಾಂಗೂಲ—ಉದ್ದವಾದ ಬಾಲ (ಆಂಗ್ಲ-ಕನ್ನಡ).

ಲಾಟ್ರಿ—ಮದುವೆ.

ಲಾಭ—ಬೊಡ ಮನೆಯಿಂದ ಇರಿದದ್ದು.

ಲಾಭರಣ—ವ್ಯಾಪಾರಿಗಳು ಮಾಡಿಸುವ ಒಡವೆ.

ಲಾಯರ್—ನಿಜವನ್ನೊಪ್ಪಿಕೊಳ್ಳಲು ಮನಸ್ಸಿಲ್ಲದವರು ತಮ್ಮ ಪರ ಸುಳ್ಳು ಹೇಳಲು, ನೇಮಿಸಿಕೊಳ್ಳುವ ನ್ಯಾಯಪಂಡಿತರು ; ನಮ್ಮ ಆಸ್ತಿಯನ್ನು ಉಳಿಸುವ ನೆಪದಲ್ಲಿ ಅದನ್ನು ಕಸಿದುಕೊಳ್ಳುವವರು ; ಇವರಲ್ಲಿ ಹಲವರು ದಡ್ಡರಾದ್ದರಿಂದ, ನ್ಯಾಯಸ್ಥಾನದಲ್ಲಿ ನ್ಯಾಯ ದೊರಕುತ್ತಿದೆಯಂತೆ.

ಲಾರಿ—ಪಾದಚಾರಿಗಳ ಷಿಕಾರಿಗೆ ಶ್ರೀಮಂತರು ಉಪಯೋಗಿಸುವ ಆಯುಧ ವಿಶೇಷ.

ಲಾವಣ್ಯ—ಉಪ್ಪು ಹೆಚ್ಚಾಗಿರುವಿಕೆ.

ಲಾಳ—ಓಡಲಾರದ ಕುದುರೆಗೆ ಲಾಳವೇ ಭಾರ ; ಲಾಳ ಸಿಗುತ್ತಲೂ ಕುದುರೆ ಕೊಂಡುಕೊಳ್ಳಬೇಕೆಂಬ ಆಶೆ ಮೂಡುತ್ತದೆ.

ಲಾಂಡುರೋಗ—ಜಮೀನುಗಳನ್ನು ವಿಸ್ತರಿಸಿಕೊಳ್ಳಬೇಕೆಂಬ ಆಸೆ.

ಲೂಠಿಚಾರ್ಜ್—ದೊಂಬಿಯೊಳಗೆ ನಡೆಯುವ ಪ್ರಕರಣ.

ಲೆಕ್ಕ—ಮನೆ ಮಕ್ಕಳಿಗೆ ತಂದೆ ಮಾಡಿಕೊಡೋದು, ಅನಂತರ ಅದರ ತಪ್ಪಿಗಾಗಿ ಮಗ ಶಾಲೆಯಲ್ಲಿ ಅಪ್ಪನ ಪರ ಏಟು ತಿನ್ನೋದು.

ಲೇಖನ—ಪತ್ರಿಕೆಗಳಲ್ಲಿ ಯಾರೂ ಓದದ ಭಾಗ.

ಲೇಟ್—ರಿಟೈರಾದ ಅಧಿಕಾರಿಗಳಿಗೆಲ್ಲ ದೊರೆಯುವ ಬಿರುದು.

ಲೇವಡಿ—ಲೇವಡಿ ರುಚಿ ಹಾವಾಡಿಗ ಬಲ್ಲನೆ ?.... ಇಲ್ಲ. ಅದನ್ನು ಮೇಷ್ಟರುಗಳೂ ಭಾಷಣಕಾರರೂ ಮಾತ್ರ ಬಲ್ಲರು.

ಲೇವಾದೇವಿ— ಅನೇಕರ ಅಧಿದೇವತೆ.

ಲೇಬ್ರರಿ— ಅನೇಕರ ಲೈಬ್ರರಿಗಳಿಂದ ಆರಿಸಿ ತಂದು ನಾವು ಶೇಖರಿಸಿಟ್ಟಿರುವ ಜಾಗ.

ಲೋಪಾಮುದ್ರೆ—ಟಸ್ಸೆ ಬೀಳದ ಸ್ಟಾಂಪು, ಪತ್ರ ಇತ್ಯಾದಿ.

## ವ

ವಕ್ಖಾಣ—ಸೊಟ್ಟ ಸೊಟ್ಟಗಿನ ವ್ಯಾಖ್ಯಾನ.

ವಕ್ತಾರ—ಮರ್ತ್ಯಲೋಕವೆಂಬುದು ವಕ್ತಾರನ ತಮ್ಮಟೆಯಯ್ಯ.

ವಕ್ರದೃಷ್ಟಿ—ಒಂದು ರೀತಿಯ ನೇತ್ರರೋಗ.

ವಜ್ರ—ಅಗ್ನಿಫಲ ; ಅದನ್ನು ಅಗೆದು ತೆಗೆಯುವವರ ಜಠರಾಗ್ನಿಯ ಫಲ ; ಸಂಸಾರ ಸುಖದ ಅಡಿಗಲ್ಲು ; ವಜ್ರದಂಥ ಹೃದಯವನ್ನು ಭೇದಿಸಲು ವಜ್ರವೇ ಉತ್ತಮ-ಸಾಧನ.

ವಜ್ರಪಂಜರ— ವಜ್ರವನ್ನು ಕಳ್ಳಕಾಕರಿಂದ ಕಾಪಾಡಲು ಉಪಯೋಗಿಸುವ ಕಬ್ಬಿಣದ ಪೆಟ್ಟಿಗೆ.

ವಜ್ರಾಯುಧ—ಸತಿಯರು ಪತಿಯರ ಮೇಲೆ ಪ್ರಯೋಗಿಸುವುದುಂಟು, ಇದನ್ನು.

ವರ್ಜ್ಯನ್ಯ ಜಪ—ನಿಲ್ಲಿಸಿ ತೊರೆದ ಜಪ.

ವರ್ಣಕವಿ—ಕುಬೇರನ ಮಗ ; ಆದ್ದರಿಂದ, ಬಣ್ಣಬಣ್ಣವಾಗಿ ಕವಿತೆ ಮಾಡುವ ಮನೋಭಾವ ಉಳ್ಳವ.

ವರ್ಣಭೀರುಃ—ಡಾ॥ ಮಲಾನ್ ಇತ್ಯಾದಿ ಜನ.

ವರ್ತಕ—ಒಂದು ತೆರನ ಹುಳ.

ವರ್ತಮಾನ ಪತ್ರಿಕೆ—ಭೂತಕಾಲದಲ್ಲಿರಲಿಲ್ಲವಂತೆ.

ವದಂತಿ—ತಂತಿಗಿಂತ ವೇಗವಾಗಿ ನಾಲ್ಕೂ ಕಡೆ ಹರಡುವ ಶಕ್ತಿ ಇದೆ, ಇದಕ್ಕೆ.
ವಂದನಾರ್ಪಣೆ—ಸಭೆ ಚೆದುರಲು ಕಾರ್ಯದರ್ಶಿ ಕೊಡುವ ಸೂಚನೆ.
ವಧೂಪರೀಕ್ಷೆ–ಇದನ್ನು ಸುಮರ್ಪಕವಾಗಿ ಯಾವ ತರುಣನೂ ಮಾಡಲರಿಯ; ಸಂದೇಹವಿದ್ದರೆ, ಇತರರ ಪತ್ನಿಯರನ್ನೆಲ್ಲ ನೋಡಿ.
ವಧೂಟೀ—ವಧೂ ತಯಾರಿಸಿದ ಚಹ.
ವಧುಮಾನ—ಬೇಬಿ ಸ್ಟಾರುಗಳ ವರಮಾನ.
ವನಸ್ಪತಿ—ದನಸ್ಪತಿಯಲ್ಲಿ ಬೆರೆಸಲು ಒದಗುವ ಒಂದು ವಸ್ತು.
ವನ್ಸ್‌ಮೋರ್—ನಾಟಕದಲ್ಲಿ ಆತ್ಮಹತ್ಯೆಯನ್ನು ಅಭಿನಯಿಸುವಾಗ, ಪ್ರೇಕ್ಷಕರು ಅದನ್ನು ಮೆಚ್ಚಿ, ಕೂಗಬಹುದಾದ ಉತ್ಸಾಹಜನಕ ಕೂಗು; ಸಿನಿಮಾದಲ್ಲಿ ಹೀಗೆ ಧೈರ್ಯವಾಗಿ ಕೂಗಬಹುದು; ಕೊಟ್ಟ ಕಾಸಿಗೆ ಹೆಚ್ಚು ಕಜ್ಜಾಯ ಪಡೆಯುವ ಆಸೆ.
ವಯಸ್ಕಾಂತ—ಆಕರ್ಷಕವಾದ ತಾರುಣ್ಯ ದೆಸೆ.
ವಯಸ್ಸು—ಇದನ್ನು ಲೆಕ್ಕ ಹಾಕ್ತಾ ಹಾಕ್ತಾ, ದುಃಖ ಜಾಸ್ತಿಯಾಗುತ್ತದೆ; ಇದರ ಬೆಳವಣಿಗೆಯಲ್ಲಿ ನಾಲ್ಕು ಹಂತಗಳಿವೆ; ಹುಡುಗು, ಪಿಡುಗು, ಗುಡುಗು, ನಡುಗು.
ವಯಸ್ವಿನಿ—ಮುದುಕಿ.
ವಯೋನಿಧಿ—ವಯಸ್ಸೊಂದನ್ನೇ ನಿಧಿಯಾಗಿ ಉಳ್ಳವನು; ಮುದಿ ಶುಂಠ ಕಾಯಿ.
ವರದಕ್ಷಿಣೆ—ಅಳಿಯನ ತಪಸ್ಸಿಗೆ ಮೆಚ್ಚಿ, ಮಾವ ಕೊಡುವ ವರ; ಕೆಲವು ಕನ್ಯಾರತ್ನಗಳನ್ನು ವರದಕ್ಷಿಣೆಗಾಗಿಯೇ ವರಿಸಬೇಕಾಗಬಹುದು.
ವರಪೂಜೆ—ಇದನ್ನು ಮಾಡುವುದು ವಿವಾಹದ ತನಕ, ಮಾವ ಮಾಡುತ್ತಾನೆ; ವಿವಾಹದನಂತರ ಮಗಳು.
ವರಮಾನ—ಸಾಮಾನ್ಯವಾಗಿ ಪ್ರತಿಯೊಬ್ಬರೂ ಇದರ ಇಮ್ಮಡಿ ಹಣವನ್ನು ವೆಚ್ಚ ಮಾಡುತ್ತಿರುತ್ತಾರೆ, ನಾಗರಿಕ ಸಮುದಾಯಗಳಲ್ಲಿ; ಕಲಿಯುಗದಲ್ಲಿ, ಅಂತಸ್ತು, ಗೌರವ, ಮರ್ಯಾದೆ, ಗುಣ–ಇವುಗಳನ್ನೆಲ್ಲ ವರಮಾನದಿಂದಲೇ ನಿರ್ಧರಿಸುತ್ತಾರೆ.
ವರರುಚಿ—ಅಳಿಯನಿಗೆ ರುಚಿಸುವಂಥದ್ದು.

ವರವಿಕ್ರಮ—ಮಗನನ್ನು ಒದ್ದೋಡಿಸಿ ಮಾಗನ ಮನೆಯಲ್ಲೇ ಇರು ಎಂದು ತಂದೆ ಹೇಳುವಾಗ.

ವರಾನ್ವೇಷಣ— ಹೆಣ್ಣು ಹೆತ್ತವರ ತಪಸ್ಸು; ಎಲ್ಲ ತಪಸ್ಸಿಗೂ ಇದೇ ಮಾತನ್ನೇ ಉಪಯೋಗಿಸಬಹುದು, ಏಕೆಂದರೆ ತಾಪಸಿಗಳಿಗೂ ಅದೇ ಗುರಿ.

ವರುಣಾಮೃತ—ಪಶ್ಚಿಮದೆಸೆಗೊಡೆಯನಾದ ವರುಣನಿಗೆ ಅಮೃತವೆನಿಸುವ ಮದ್ಯವಿಶೇಷ ; ಸೋಮರಸವಲ್ಲ.

ವಲಂ—ಮನುಷ್ಯಜಾತಿ ತಾನೊಂದೆ ವಲಂ (ಪಂಪ).

ವಂಶಚ್ಛೇದ—ಮೇದರ ಕೆಲಸ.

ವಂಶಕ್ಷಯಃ—ಸಾಹಿತಿಗಳಿಂದಲೂ ಬರಹಗಾರರಿಂದಲೂ ಪ್ರತಿಕಾಕರ್ತರಿಂದಲೂ ಆಗುತ್ತಿರುವುದು ಇದೊಂದೇ.

ವರ್ಷ—ಮಳೆಗಾಲದ ಖಾಯಿಲೆಗಳನ್ನು ಮನುಷ್ಯ ಕಟಾಯಿಸುವುದು ಕಷ್ಟ-ವಾಗಿರುವುದರಿಂದಲೇ, ಆಯುಸ್ಸನ್ನು ವರ್ಷಗಳಿಂದ ಲೆಕ್ಕ ಮಾಡುವುದು.

ವರ್ಷಗಂತಿ—ಈಕೆಯ ಪತಿಗೆ ಆತ್ಮಹತ್ಯೆಯೇ ಗತಿ.

ವಷಟ್ಕಾರ—ಬೆಂಕಿಗೆ ಬಿದ್ದು ಹೋಗು ಎಂಬ ಬೈಗಳು.

ವಸಂತ—ಕವಿಗಳಿಗೆ ಹುಚ್ಚು ಬರುವ ಕಾಲ.

ವಹವಾ ಚಾಪಲ್ಯ—ಜನರ ಮೆಚ್ಚುಗೆ ಪಡೆಯಬೇಕೆಂಬ ದುರಾಸೆ.

ವಾ—ನರನಿಗೂ ವಾನರನಿಗೂ ಇರುವ ವ್ಯತ್ಯಾಸ.

ವಾಕರಿಕೆ—ಕೆಲವರ ವಾಕ್ ಕೇಳುವಾಗ ಆಗುವ ಪ್ರತಿಕ್ರಿಯೆ.

ವಾಕಿಂಗ್—ಕಾರಲ್ಲೇ ಸದಾ ಓಡಾಡುವವರಿಗೆ ವೈದ್ಯರು ವಿಧಿಸುವ ಶಿಕ್ಷೆ.

ವಾಕ್ಕೋವಿದ—ವಾಕ್ಕನ್ನೇ ಕೋವಿಯಾಗಿ ಉಪಯೋಗಿಸುವ ಅಗ್ನಿಭಕ್ಷಕ.

ವಾಗಾಡೊಂಬರ—ಮಾತಿನ ಚಮತ್ಕಾರ ತೋರಿಸಿ ಮೋಹಿಸುವವ.

ವಾಗ್ದಾನ—ಅತಿ ಸುಲಭವಾದ ದಾನ; ರಾಜಕೀಯ ನಾಯಕರು ಹುಚ್ಚಾಪಟ್ಟೆ ವಿತರಣಮಾಡುವ ಒಂದು ಅಗ್ಗದ ಪದಾರ್ಥ.

ವಾಚಾಲ—ಎರಡು ನಿಮಿಷಗಳಲ್ಲಿ ಹೇಳಬಹುದಾದ್ದನ್ನು ಎರಡು ಗಂಟೆಗಳ ಕಾಲ ಹೇಳುವವ.

ವಾತವ್ಯಾಧಿ—ಒಬ್ಬ ಪ್ರಖ್ಯಾತ ಮಹರ್ಷಿ; ಗಾಳಿಕುಡಿಯಲು ವಾಕಿಂಗ್ ಹೋಗಿ ಬಂದರೆ ಮಾತ್ರ ವಾಸಿಯಾಗುವ ಒಂದು ತೆರದ ವ್ಯಾಧಿ.

ವಾರ್ತಾನುಜೀವಿ—ಬಾತ್ಮೀದಾರ.

ವಾದಪೂಜೆ—ವಾದವಿವಾದಗಳೆಬ್ಬಿಸಿ ಲೇಖಕರನ್ನು ಪ್ರಖ್ಯಾತಿಗೆ ತರುವ ವಿಧಾನ.

ವಾದ್ಯಧ್ವನಿ—ನಿಕ್ವಾಣೋ ನಿಕ್ವಣಃ ಕ್ವಾಣಃ ಕ್ವಣಃ ಕ್ವಣನಮಿತ್ಯಪಿ.

ವಾದ್ಯಾಸ್ತ್ರ—ಕಿವಿ ನೋವಿಗೆ ಮೂಲಕಾರಣ; ಶಬ್ದಾಸ್ತ್ರ.

ವಾದ್ಯರಾಕ್ಷಸ—ಹಾರ್ಮೋನಿಯಂ ವಿದ್ವಾನ್.

ವಾದಿ—ಈತನಿಲ್ಲದೇ ಹೋದರೆ, ಪ್ರತಿವಾದಿಯೇ ಇರುವುದಿಲ್ಲ.

ವಾದಿಸಿಂಹ—ಪ್ರತಿವಾದಿ ಭಯಂಕರನ ಮೇಲೆ ಬೀಳುವ ಪ್ರಾಣಿ.

ವಾದೇ ವಾದೇ—"ವಾದೇ ವಾದೇ ಜಾಯತೇ ತಪ್ಪು ಬೋಧಃ" (ಗಾದೆ).

ವಾರ್ಧಕ್ಯಷಟ್ಪದಿ—ಮುದಿತನದಲ್ಲಿ ಹೊರಡುವ ಹಾಡಿನ ರೀತಿ.

ವಾಮಾಚಾರ—ಎಡಗೈನೀಡುವ ಸಂಪ್ರದಾಯ, ವಾಮಾಗಮ.

ವಾಮಾಚಾರಿ—ಸಮತಾವಾದಿ; ಲಂಚಿಗ.

ವಾರ್ಮೋಡ—ಯುದ್ಧಾಗಮನವನ್ನು ಸೂಚಿಸುವ ದ್ವೇಷಾಗ್ನಿಯ ಹೊಗೆ.

ವಾಯುಮಂಡಲ—ರೇಡಿಯೋ ಕಾರ್ಯಕ್ರಮಗಳು ನಿಂತಾಗ ಇದು ಶುಭ್ರ ವಾಗಿರುತ್ತದೆ.

ವಾರಸುಧಾರ—ವಾರವಾರವೂ ಗ್ರಾಮಸುಧಾರಣೆ ನಡೆಸಲು ಹಳ್ಳಿಗಳ ಕಡೆ ಹೋಗುವ ಶಾಲಾ ಹುಡುಗರ ತಂಡ.

ವಾರುಣೀ—ಹೆಂಡ; ಪಾಶ್ಚಾತ್ಯ ದ್ರಾವಕ.

ವಾಲೆ—ವಾಲೆಯಂತೆ ಮಾಲೆ, ಸೀರೆಯಂತೆ ಸೀತ; ನೂರಿರೋರೆಲ್ಲ ಕುರ್ಚೀಲಿ, ಕಾರಿರೋರೆಲ್ಲ ಕಮಿಟೀಲಿ–ಎಂಬುದೇ ಪದ್ಧತಿ ಮಹಿಳೆಯರ ಸಂಘ ಗಳಲ್ಲಿ; ಪುಸ್ತಕವಾಲೆ ಕಿವೀಗಲ್ಲ.

ವಾಲೋಕಿಸು—ಓರೆಯಾಗಿ ನೋಡು.

ವಾಹ್ಯಾಳಿ—ಜೂಜು ಕುದುರೆಗಳ ಗುಂಪು.

ವಿಚಾರಣೆ—ಎರಡು ಕಾದಂಬರಿಗಳ ಪೈಕಿ ಯಾವುದು ಸಹಜ ಸುಂದರವಾಗಿದೆ ಎಂದು ನ್ಯಾಯಮೂರ್ತಿಗಳು ನಿರ್ಧರಿಸುವ ಕ್ರಮ.

ವಿಚಿತ್ರಲೇಖೆ—ರವೀಂದ್ರರ ಚಿತ್ರಕಲಾವೈಖರಿ.

ವಿಜಯಲಕ್ಷ್ಮಿ—ಜಾಂಬವಂತನಿಗೆ ಮಾತ್ರ ಒಲಿಯುವವಳು.

ವಿಜೃಂಭಣೆಯಿಂದ—ಎಲ್ಲರೂ ಬೇಜಾರುಪಟ್ಟು ಆಕಳಿಸಿ ಅಸಹ್ಯಪಡುವಷ್ಟು

ಅವಲಕ್ಷಣದಿಂದ.

ವಿಜ್ಞಾನ—ಪ್ರಪಂಚವನ್ನೇ ನಾಶಮಾಡುವಷ್ಟು ಜ್ಞಾನ.

ವಿಠ್ಠಲಾಚಾರ್—ಸಭಿಕರ ಸಂತೋಷಕ್ಕೆ ತಕ್ಕಂತೆ ಉಪನ್ಯಾಸವನ್ನು ಲಂಬಿಸಬಲ್ಲ, ಅಥವಾ ಮೊಟಕುಮಾಡಬಲ್ಲ ಚತುರ.

ವಿತುಂಡವಾದಿ—ವಿಶೇಷವಾದ ತಂಡವನ್ನು ಕಟ್ಟಿಕೊಂಡು ವಾದಕ್ಕೆ ಬರುವವ.

ವಿತ್ತಂ—ಭಗವಂತನು ತನಗಾಗದವರ ಹತ್ತಿರ ಇರಿಸಿರುವ ಗಂಟು.

ವಿತ್ತಗಂಧಿ—ಶ್ರೀಮಂತರ ದುರಹಂಕಾರದ ಧೋರಣೆ.

ವಿತ್ತಪತ್ರಿಕೆ—ಕೋಟ್ಯಾಧೀಶ್ವರರು ತಮ್ಮ ದರ್ಪಪ್ರಚಾರಕ್ಕಾಗಿ ಕೊಂಡು ನಡೆಸುವ ಪತ್ರಿಕೆ.

ವಿತ್ತಭ್ರಮೆ—ದುಡ್ಡು ಕೊಟ್ಟರೆ ಎಂಥದನ್ನೂ ಪಡೆಯಬಹುದು, ಎಂಬ ಭಾವನೆ; ಅಮೆರಿಕನ್ ಖಾಯಿಲೆ.

ವಿದರ್ಭಶಾಪ—ಬಟ್ಟತಲೆಗೆ ಇಂಥದ್ದೇ ತಗಲಿರುವುದು.

ವಿದ್ವತ್ಸಂಭಾವನೆ—ಸಾಮಾನ್ಯವಾಗಿ, ಅರ್ಧಚಂದ್ರ.

ವಿದ್ಯಾರ್ಥಿ—ಅಪ್ಪನಿಗೆ ವಿದ್ಯೆಕಲಿಸಿ, ಗುರುವಿಗೆ ತಿರುಮಂತ್ರ ಹೇಳುವ ಹುಡುಗ.

ವಿದ್ಯಾರ್ಥಿನಿ—ತರುಣರ ಕಥೆ–ಕಾದಂಬರಿಗಳಲ್ಲಿನ ನಾಯಕಿ.

ವಿದ್ಯಾಧರ—ಪದವೀಧರರನೇಕರು ವಿದ್ಯಾಧರರೆನಿಸಿಕೊಳ್ಳಲಾರರು.

ವಿದ್ಯಾಭ್ಯಾಸ—ಮರವಾದಾಗ ಬಗ್ಗದಲ್ಲಾ, ಎಂದು ಗಿಡವಾಗಿರುವಾಗಲೇ ಬಗ್ಗಿಸುವ ವಿಧಾನ.

ವಿದ್ಯುಚ್ಛಕ್ತಿ—ಅಗ್ಗದ ಮಿಂಚು.

ವಿದೂಷಕ—ಬುದ್ಧಿಯಲ್ಲೂ ರೂಪದಲ್ಲೂ ಗುಣದಲ್ಲೂ ಧೈರ್ಯದಲ್ಲೂ ರಾಜನೇ ಮೇಲು....ಎಂದೆನಸಲು ಸಹಾಯ ಮಾಡುವ ಮನುಷ್ಯ.

ವಿಧಿ—ನಾವು ಸೋತಾಗ, ಆ ಸೋಲು ಇದರಿಂದಲೇ, ಎಂದು ತಿಳಿಯಬೇಕು—ಬೇರೊಬ್ಬರ ಮೇಲೆ ಹೊಣೆ ಹೊರಿಸಲಾಗದಿದ್ದರೆ.

ವಿಧ್ಯಾಪಕ—ಕಾನೂನು ಕಟ್ಟಳೆಯಂತೆ ನಮಗೆ ಅಧ್ಯಾಪಕನಾಗಿ ದೊರೆತವ.

ವಿಧುರ—ಹೆಂಡತಿ ಬದುಕಿರುವಾಗ ಗಂಡ.

ವಿಧುರ ವಾಕ್ಯ—ಅನುಭವದ ಉಪದೇಶ....ಮದುವೆ ವಿಷಯದಲ್ಲಿ.

ವಿನಯ—ಸಮಾಜದ ಗಣ್ಯತೆ ಪಡೆಯಲು ನಾವು ಆಡುವ ಸುಳ್ಳಾಟ.

ವಿನೋದ— ದೊಡ್ಡವರು ವಿನೋದವಾಡಿದರೆ, ಮರ್ಯಾದಸ್ಥರೆಲ್ಲ ನಗಲೇಬೇಕು.

ವಿಪರೀತ ಮನುಷ್ಯ—ತನ್ನ ಪಾಡಿಗೆ ತಾನಿರುವವನು.

ವಿಪ್ರಲಂಬ—ಎತ್ತರವಾದ ಬ್ರಾಹ್ಮಣ.

ವಿಮರ್ಶೆ—ವಿಮರ್ಶಕನ ಗುಣಾವಗುಣಗಳನ್ನು ಹೊರಗೆಡಹುವ ಬರವಣಿಗೆ.

ವಿಮಾನ— ವಿಮಾನ ಏರಬೇಕಾದರೆ ಪರಮಾನ್ನ ತಿನ್ನಬೇಕೆ ?—ಎಂಬ ಗಾದೆಗೆ, ಹೂಂ ! ಪರಮಾನ್ನ ತಿನ್ನುವಷ್ಟು ವರಮಾನ ಇರಬೇಕು ಎಂಬುದೇ ಉತ್ತರ.

ವಿಮಾನೋಸ್ತ್ರೀ—ವಿಮಾನಪ್ರಯಾಣಿಕರಲ್ಲಿ ಶುಶ್ರೂಷೆಗಾಗಿ ನೇಮಕವಾಗಿರುವ ನೌಕರಿ.

ವಿರಹ ಜ್ವರ—ರಿಟೈರಾಗಿ ಮನೆಯಲ್ಲಿ ಕುಳಿತಿರುವವರ ಕೊರಗು ; ಇದರಿಂದ ಅನೇಕರು ಪ್ರಾಣ ನೀಗುವುದೂ ಸಂಭವ ಇದೆ.

ವಿರೋಚನ—ಮಗನನ್ನು ಹೆತ್ತು ಪ್ರಪಂಚಕ್ಕೆ ಬಲಿ ಎನಿಸಿದವನು.

ವಿವಾಹ—ಕಾಡಿನ ನೆಲ್ಲಿ, ಕಡಲಿನ ಉಪ್ಪು—ಸಂಸಾರದ ಜಾಡಿಯಲ್ಲಿ ಬೆರೆತು ವ್ಯಂಜನವಾಗುವ ಬಗೆ.

ವಿವಿಧ ವಿನೋಧ ಹಾವಳಿ—ಶಾಲಾ ಕಾಲೇಜುಗಳ ವಿದ್ಯಾರ್ಥಿಗಳು ನಿಧಿ ವಸೂಲಿಗಾಗಿ ಏರ್ಪಡಿಸುವ ಗಲಿಬಿಲಿ.

ವಿವೇಕ ಜಲ—ಕಂಬನಿ.

ವಿಶ್ವವಿದ್ಯಾಲಯ—ಕ್ರೀಡಾರಂಗದ ಬೆಳವಣಿಗೆಗೆ ಇದು ಅತ್ಯಗತ್ಯ.

ವಿಶ್ವಭಾರ – ತೂಕದ ಮನುಷ್ಯ.

ವಿಶಾಲ ಮನಸ್ಕ—ಉಭಯ ಪಕ್ಷದವರ ಸಭೆಗಳಿಗೆ ಹೋಗಿ ತಲೆದೂಗಿ ಚಪ್ಪಾಳೆ ತಟ್ಟುವವ.

ವಿಶ್ವಾಸಕೋಶ—ರಿಸರ್ವ್ ಫಂಡ್; ಐರನ್ ಲಂಗ್.

ವಿಷಪುಷ್ಪ—ಹಲವು ಇಲಾಖೆಯ ಅಧಿಕಾರಿಗಳೂ ನೌಕರರೂ.

ವಿಷ್ಣುಕ್ರಾಂತಿ—ವೈಷ್ಣವರು ಹೂಡಿದ್ದು.

ವಿಸ್ಕಿ—ಹಣದ ಮದದಿಂದ ಇದನ್ನು ಮೊದಲು ಕುಡಿಯಲು ತೊಡಗಿದರೂ, ಅನಂತರದ ಸಾಲಸೋಲಗಳನ್ನು ಮರೆಯಲು ಇದು ಅಗತ್ಯಬೇಕಾಗುತ್ತದೆ.

ವೀರ ಪಾನ—ಬೀರ ಪಾನ ಎಂದೂ ಇದಕ್ಕೆ ಹೇಳುವುದುಂಟು; ಬೀರ್.

ವೀರ ಬಾಹು—ಅಣುಬಾಂಬನ್ನು ಕೆಡವಲು ಸಿದ್ಧಮಾಡಿಕೊಂಡಿರುವ ವೈಮಾನಿಕನ ಕೈ.

ವೀರಾವೇಷ—ಸೈನಿಕನ ಸಮವಸ್ತ್ರ.

ವೇಗದೂತ—ಮೋಟಾರ್ ಸೈಕಲ್ ಜವಾನ.

ವೇದನಾರವಿಂದ—ಸಂಕಟದಲ್ಲಿ ನರಳುವ ವದನಾರವಿಂದ.

ವೇದಾಂತ—ಪರರಿಗೆ ಬೋಧನೆ ಮಾಡಲು ಅನುಕೂಲಿಸುವ ತತ್ತ್ವ; ಏನೂ ತಿಳಿಯದು, ಎಂದು ವಿಸ್ತರಿಸಿ ಹೇಳುವ ರೀತಿ; ಬಡತನವೇ ಶ್ರೇಷ್ಠ-ವಾದ ಸಿರಿ, ಎಂದು ಶ್ರೀಮಂತರು ಪ್ರಚಾರ ಮಾಡಿರುವ ಶಾಸ್ತ್ರ.

ವೇದಿಕೆ—ಇದರ ಮೇಲೆ ಹತ್ತಿ ನಿಂತರೆ, ಅನೇಕರಿಗೆ ತಲೆ ತಿರುಗುತ್ತದೆ.

ವೇಣೀಸಂಹಾರ—ಹೇನುಗಳ ಕೆಲಸ.

ವೈದ್ಯ—ರೋಗಿಯ ಪರ್ಸು ಹಿಡಿದು ನೋಡಿ, ಖಾಯಿಲೆ ಯಾವುದೆಂದು ನಿರ್ಧರಿಸಬಲ್ಲವ; ಆರೋಗ್ಯ ಕೆಡಿಸಿಕೊಂಡು ಗಳಿಸಿದ ಹಣವನ್ನು ಈತನಿಗೆ ಕೊಟ್ಟು ಈತನ ಆರೋಗ್ಯ ಕಾಪಾಡಬಹುದು.

ವೈಶಾಖ ಭೂತಿ—ಆಷಾಢ ಭೂತಿಯನ್ನು ನೋಡಿ.

ವೋಟು—ದೇಶದ್ರೋಹ ಮಾಡಲು ನಮಗಿರುವ ಒಂದು ಅವಕಾಶ.

ವೋಟರು—ಐದು ವರ್ಷಕ್ಕೊಮ್ಮೆ ಹಠಾತ್ತನೆ ದೊಡ್ಡಮನುಷ್ಯರಾಗುವ ಸಾಮಾನ್ಯ ವ್ಯಕ್ತಿಗಳು; ಯಾರೋ ಮೆಚ್ಚಿ ಮುಂದೆ ನಿಲ್ಲಿಸಿದವನನ್ನು ತನ್ನವನೆಂದೇ ಭಾವಿಸಿ ಮೆಚ್ಚುವವ.

ವೃತ್ತ ಪತ್ರಿಕೆ—ಲೋಕದ ಶೋಕಪತ್ರಿಕೆ; ಪ್ರಪಂಚದ ಕಸದ ಬುಟ್ಟಿ; ಇದನ್ನು ದಿನದಿನವೂ ತುಂಬಿ ನಮ್ಮ ಬಾಗಿಲಲ್ಲೇ ಇಡುತ್ತಾರೆ.

ವೃಥಾಪ್ಯ—ವೃಥಾ ಕೊರಗಬೇಕಾದ ವೃದ್ಧಾಪ್ಯ.

ವೃಥಾಶ್ರಮ—ವೃದ್ಧಾಶ್ರಮಗಳನ್ನು ನಡೆಸುವುದು.

ವೃದ್ಧ—ಅನೇಕ ವರ್ಷಗಳ ಕಾಲ ವೈದ್ಯರಿಂದಲೂ ಲಾರಿಗಳಿಂದಲೂ ತಪ್ಪಿಸಿಕೊಂಡು ತಿರುಗಾಡುವವ; ಎಲೆ ಮರೆಯ ಬಾಳು ನಡೆಸಿದವ.

ವೃದ್ಧ ಕನ್ಯಾ—ಈಕೆಯನ್ನು ಶೃಂಗವಂತನೇ ಮದುವೆಯಾದ; ಸೂಲಗಿತ್ತಿ, ನರಸು ಮುಂತಾದವರು.

ವೃದ್ಧಕೂಟಪರ್ವತ—ಲಾಲ್‌ಬಾಗ್ ಮುಂತಾದ ಉದ್ಯಾನಗಳಲ್ಲಿನ ಶಿಲಾಸನ.

ವೃದ್ಧಾಂತ—ಮುದುಕರ ಸಮಾಚಾರ.

ವೃದ್ಧಾಪ್ಯ—ಮಕ್ಕಳು ಉಪದೇಶ ನೀಡುವ ಕಾಲ; ಹಿಂದಿನದೆಲ್ಲ ಹೋಯಿತಲ್ಲಾ ಎಂದು ಮರುಗುವ ಕಾಲ; ಮಾಡಬಹುದಾದ್ದನ್ನೆಲ್ಲ ಮಾಡಲಿಲ್ಲವಲ್ಲಾ ಎಂದು ತಲೆಯ ಮೇಲೆ ಕೈ ಇಟ್ಟು ಕೂರುವ ಕಾಲ; ಎರಡನೆಯ ಶೈಶವ, ಶೈಶವತನದಿಂದ ಬೆಳೆದ ಹಲವರಿಗೆ.

ವೃದ್ಧಾಶ್ರಮ—ಒಂದು ಪ್ರಾಣಿದಯಾ ಸಂಸ್ಥೆ.

ವ್ರಣತಾರ್ತಿಹರ—ಮುಲಾಮು.

ವ್ರಣವಾದ್ಯ—ಹಾರ್ಮೋನಿಯಂ ಪೆಟ್ಟಿಗೆ.

ವ್ಯರ್ಥಶಾಸ್ತ್ರ—ಮುಕ್ಕಾಲು ಮೂರು ವೀಸೆ, ಎಲ್ಲವೂ.

ವ್ಯಾಧಿಪತ್ಯ—ವ್ಯಾಧಿಗ್ರಸ್ತನಾದ ಮನೆ ಯಜಮಾನ ಹಾಸಿಗೆಯಿಂದಲೇ ಎಲ್ಲರ ಮೇಲೂ ಚಲಾಯಿಸುವ ಅಧಿಕಾರ.

ವ್ಯಾಧಿ ಪುರಾಣ—"ಸೌಖ್ಯವೋ ?" ಎಂಬ ಕುಶಲ ಪ್ರಶ್ನೆಗೆ ಪ್ರತಿ ಒಬ್ಬರೂ ಹೇಳುವ ಉತ್ತರ.

ವ್ಯಾಪಾರಗಾರ—ಸತ್ಯಮೇವ ಜಯತೆ, ಎಂಬುದು ಕೇವಲ ಅನೃತವಾಣಿ, ಎಂದು ನಂಬಿರುವವ.

ವ್ಯಾಯಾಮ—ಕೂತು ತಿನ್ನುವವರಿಗೆ ಇದೇ ಪ್ರಾಯಶ್ಚಿತ್ತ.

ವ್ಯಾಯಾಮೋಹ—ವ್ಯಾಯಾಮದಿಂದ ಹಲವು ರೋಗಗಳನ್ನು ವಾಸಿ ಮಾಡಬಹುದೆಂಬ ತಪ್ಪು ಭಾವನೆ.

ವ್ಯಾಯೋಗ—ಸ್ತ್ರೀ ನಿಮಿತ್ತವಲ್ಲದ ಜಗಳ ; ಅಂದರೆ,............ಒಂದು ಬಗೆಯ ಗಗನಪುಷ್ಪ.

ವ್ಯೂಹ—ವ್ಯೂಗೊಂದು ವ್ಯೂಹ ರಚಿಸಿ ಯುದ್ಧ ಹೂಡುವುದೇ ಭಾರತೀಯರ ಪದ್ಧತಿ.

## ಶ

ಶಕಟಾಸುರ—ಜಟಕಾ ಹೊಡೆಯುವವ.

ಶಕಾರ—ಶಷಸಗಳನ್ನು ಶಶಶಗಳಾಗಿಯೇ ಉಚ್ಚರಿಸುವ ಅಭ್ಯಾಸ ಇರುವವ.

ಶಕ್ತಿಪೂಜೆ—ಶಕ್ತಿಯುತವಾದ ನೆರೆ ರಾಷ್ಟ್ರದ ನೆರಳಿನಲ್ಲೇ ಕುಗ್ಗಿ ಬಾಳಲು ಕಾತುರವಾಗಿರುವುದು; ಯಾವ ಪಕ್ಷಕ್ಕೆ ಹೆಚ್ಚು ವೋಟು ಬರಬಹುದೋ ಆ ಪಕ್ಷದೊಳಕ್ಕೆ ಜಾರುವ ಮನೋಭಾವ.

ಶಕುನ—ಇದನ್ನು ಕೆಡಿಸುವುದಕ್ಕಾಗಿ ಹಲವರು ತಮ್ಮ ಮೂಗನ್ನೇ ಕುಯ್ದು ಕೊಳ್ಳುತ್ತಾರೆ.

ಶಕುನಿ—ಊರಿಗೊಬ್ಬ ಶಕುನಿ ಇದ್ದೇ ಇರುತ್ತಾನೆ; ವಾದ ಮಾಡುವ ಜಂಬದ ಕೋಳಿ.

ಶಂಕುಸ್ಥಾಪನೆ—ದೊಡ್ಡವರು ಕಲ್ಲು ಹಾಕಿದರೆ, ಹೀಗೆಂದು ಹೊಗಳುತ್ತಾರೆ; ಕಂಬ ನೆಡುವ ಬದಲು ಈಗ ಕಲ್ಲನ್ನೇ ಹಾಕುತ್ತಿದ್ದಾರೆ.

ಶತಪಥ ಬ್ರಾಹ್ಮಣ—ನೂರು ಸಾರಿ ತಿರುಗುವ ಹಾರುವ.

ಶತಕೋಟಿ—ಸಿಡಿಲು; ಏಕೆಂದರೆ, ಶತಕೋಟಿ ಹಣ ಇದ್ದರೆ, ಸಿಡಿಲು ಬಡಿದಂತೆಯೆ.

ಶತದ್ರೋಹಿ— ಶತದ್ರೋಹಿಗೆ ಶಾಲು ಜೋಡಿ (ಗಾದೆ).

ಶತ್ರು—ಬಡ ನಂಟ.

ಶನಿಕಾಟ—ನಮಗೆ ಬರುವ ಕಷ್ಟಗಳೆಲ್ಲ ನಮ್ಮ ದೋಷದಿಂದಲ್ಲ, ಎಂದು ನಾವು ಸಮಾಧಾನಪಡೆಯಲು ಇದರಲ್ಲಿ ನಂಬಿಕೆ ಇರಬೇಕು.

ಶನಿವಾರ—ಎಣ್ಣೆ ಸಿಕ್ಕಿದ ದಿನವೇ ಶನಿವಾರ.

ಶನೀಶ್ವರ—ರಾಮೇಶ್ವರಕ್ಕೆ ಹೋದಾಗ, ಅಲ್ಲೂ ನಮ್ಮನ್ನು ಪೀಡಿಸುವ ಪೂಜಾರಿಗಳು.

ಶಬರೀ ನೈವೇದ್ಯ—ಎಂಜಲು.

ಶರ—ಬಾಣ; "ಶರದೊಳ್ ದಿಗ್ವಿಜಯಂ ಉಚಿತಂ"; ಪಂಚಮುದಳದಿಂದಲ್ಲ.

ಶರಭಂಗ—ಬಾಧೆ ಕೊಡುತ್ತಿರುವ ಬಾಣವನ್ನು ಕಿತ್ತು ಮುರಿಯುವುದು.

ಶಸ್ತ್ರಕ್ರಿಯೆ—ಹಣದ ಗಂಟನ್ನು ವೈದ್ಯರು ಹೊರ ತೆಗೆಯುವ ರೀತಿ.

ಶಸ್ತ್ರವೈದ್ಯ— ಪರ ಹಿತಕ್ಕಾಗಿ ರಕ್ತ ಚೆಲ್ಲಲು ಸಿದ್ಧನಾಗಿರುವವ.

ಶಂಖ—ಕೇಳುವವರಿಗೆಲ್ಲ ಕಿವುಡಾದರೂ, ಊದೋ ಶಂಖ ಊದಿಬಿಡುವುದೇ ಮೇಲು.

ಶಾಖಾಮೃಗ—ತನ್ನ ವಂಶವೃಕ್ಷದ ಶಾಖೆಯಲ್ಲಿ ನೇತಾಡಿಕೊಂಡು ಕುಣಿಯುವ

ಮೃಗ.

ಶಾಂತ ಸಾಗರ—ಅಂತಾರಾಷ್ಟ್ರೀಯ ಅಶಾಂತಿ ತುಂಬಿದ ಸಮುದ್ರ.

ಶಾಂತಿ–ಒಂದು ಯುದ್ಧದಲ್ಲಾದ ಸುಸ್ತು ಪರಿಹಾರಕ್ಕಾಗಿಯೂ, ಮತ್ತೊಂದು ಯುದ್ಧದ ಸನ್ನಾಹಕ್ಕಾಗಿಯೂ, ಮಹಾರಾಷ್ಟ್ರಗಳು ಉಪಯೋಗಿ-ಸುವ ವಿಶ್ರಾಂತಿ ಕಾಲ; ಸಿಂಹವೂ ಜಿಂಕೆಯೂ ಒಟ್ಟಿಗೆ ಮಲಗಿ ನಿದ್ರಿಸುವ ಸನ್ನಿವೇಶ—ಜಿಂಕೆ, ಸಿಂಹದ ಹೊಟ್ಟೆಯಲ್ಲಿ ಅಡಗಿಕೊಂಡು ಗಾಢನಿದ್ರೆ ಮಾಡುವ ಸನ್ನಿವೇಶ.

ಶಾಂತಿವಾದಿ—ಶಾಂತಿಯನ್ನು ನೆಲೆಗೊಳಿಸುವ ಸಲುವಾಗಿ ಯುದ್ಧ ಹೂಡಲು ಸಿದ್ಧನಾಗಿರುವವ.

ಶಾಂತಿ ರಕ್ಷಣೆ—ಯುದ್ಧ ಸಿದ್ಧತೆ.

ಶಾನುಭೋಗ—ಹೊಟ್ಟೆಗಿಲ್ಲದ ಶಾನುಭೋಗ ಹಳೇ ಮಾಮೂಲು ನೆನೆದ.

ಶಾಪ—'ಶಾಪಾದಪಿ ಶರಾದಪಿ'–ಎಂಬುದೇ ಯೂನೋ ಸಂಸ್ಥೆಯ ನೀತಿ.

ಶಾಪಾರಾಧನೆ—ಬೈಗಳಾರತಿ.

ಶಾರೀರ–ಶರೀರದ ಆಯಕಟ್ಟನ್ನು ಅನುಸರಿಸಿ ಅವಲಂಬಿಸಿರುವ ನಾದ ವಿಶೇಷ.

ಶಾಲಿವಾಹನ—ಅಕ್ಕಿ ಕಳ್ಳ.

ಶಾಲು—ಹಾಸಿಗೆ ಇದ್ದಷ್ಟು ಶಾಲು ಚಾಚಬೇಕು.

ಶಾಲೆ—ರಜಾ ದಿನಗಳನ್ನು ಮಕ್ಕಳು ಅತ್ಯಾನಂದದಿಂದ ಕಳೆಯಬೇಕಾದರೆ, ಅವರನ್ನು ಶಾಲೆಗಳಿಗೆ ಸೇರಿಸಲೇ ಬೇಕು.

ಶಾಸ್ತ್ರ—ಅಂಬೋಕೆ ಮಾಡಿದ್ದು.

ಶಿಖಂಡಿ—ಕ್ರಾಪಿಗ; ಶಿಖೆಯನ್ನು ಖಂಡತುಂಡುಮಾಡಿದವ.

ಶಿರಸಾವಹಿಸಿ—ತಲೆನೋವನ್ನು ಶಿರಸಾವಹಿಸಲೇಬೇಕು.

ಶಿಲ್ಪಕಲೆ—ಕಲ್ಲೊಳಗೆ ಕಲ್ಲಾಗಿ ಅವಿತಿರುವ ಮೂರ್ತಿಯನ್ನು ಬಿಡಿಸಿ ಬದುಕಿಸುವ ಕಲೆ.

ಶಿಲಾ ಪ್ರತಿಮೆ—ಬಿಸಿಲು ಮಳೆಗಳ ಹೊಡೆತಕ್ಕೂ ಕಾಗೆ-ಗೂಗೆಗಳ ಕುಳಿತಕ್ಕೂ ಗುರಿಯಾಗಿ ಚೌಕಗಳಲ್ಲಿ ನಿಲ್ಲಿಸಿರುವ ದೊಡ್ಡವರ ಪ್ರತಿಮೆ.

ಶಿಲಾ ವಿಗ್ರಹ—ನಿಮ್ಮ ಶಿಲಾ ವಿಗ್ರಹವನ್ನೇಕೆ ನಿಲ್ಲಿಸಿದ್ದಾರೆ, ಎಂದು ಜನ ಕೇಳುವುದಕ್ಕಿಂತ, ನಮ್ಮ ಶಿಲಾ ವಿಗ್ರಹವನ್ನೇಕೆ ನಿಲ್ಲಿಸಿಲ್ಲ ಜನ ಎಂದು ಕೇಳು

ವುದೇ ಕಿವಿಗಿಂಪು.

ಶಿಶುಗಳು—ನಾವೆಲ್ಲ ಶಿಶುಗಳೇ—ಕೆಲವು ಬೆಳೆದಿವೆ, ಕೆಲವು ಬೆಳೆದಿಲ್ಲ, ಅಷ್ಟೇ ವ್ಯತ್ಯಾಸ.

ಶಿಶುಪಾಲ—ಸಾಮಾನ್ಯವಾಗಿ, ಗಂಡ.

ಶಿಶು ಶಿಕ್ಷಣ—ಕಂಡವರ ಮಕ್ಕಳನ್ನು ಭಾವಿ ಹತ್ತಿರ ಕರೆದುಕೊಂಡು ಹೋಗಿ, ಆಳ ನೋಡಿಸುವುದು.

ಶಿಶು ಸಾಹಿತ್ಯ—ಕೆಲಸವಿಲ್ಲದ ಕವಿ ಮಕ್ಕಳ ಕವನ ಬರೆದ (ಗಾದೆ).

ಶಿಶು ಹಿತೈಷಿಣಿ—ಕುಮಾರ ಸಂಭವದ ಅರ್ಥ ಚೆನ್ನಾಗಿ ಮನದಟ್ಟಾಗಲು ಈ ಗ್ರಂಥವನ್ನು ಪಠಿಸಬೇಕಂತೆ.

ಶಿಷ್ಟಾಚಾರ—ನಮ್ಮ ಕೋಮಿನವರ ಆಚಾರ.

ಶುಕ—ರಾವಣನ ಮಂತ್ರಿ; ಡಿಕ್ಟೇಟರುಗಳ ಹತ್ತಿರ ಬಾಳಬೇಕಾದರೆ ಶುಕನಾಗಿಯೇ ಇರಬೇಕಾಗುತ್ತದೆ.

ಶುಕ ಪಂಜರ—ಪ್ರೈಮರಿ ಶಾಲೆಗಳು.

ಶುಕಮಣಿ—ರಾಜಕೀಯ ಪಕ್ಷಗಳ ಅನುಯಾಯಿಗಳ ಹೇಳಿಕೆ.

ಶುಂಠ—ನಮ್ಮ ತರ್ಕಕ್ಕೆ ತಲೆದೂಗದವ; ಅಧ್ಯಾತ್ಮ ಚರ್ಚೆಯಲ್ಲಿ ನಮ್ಮ ಪ್ರತಿವಾದಿ.

ಶುಂಠಿ—ಮೂಢ ಹೆಂಗಸು.

ಶುದ್ಧನ್—'ಜನ ಮೆಚ್ಚಿ ಶುದ್ಧನ್' ಅವನು ಹೇಗಾದರೂ ಇರಲಿ.

ಶುದ್ಧ ಸುಳ್ಳು—ಇದಕ್ಕೆ ಇಂಗ್ಲಿಷಿನಲ್ಲಿ ಬಿಳಿ ಸುಳ್ಳು ಎಂದು ಹೇಳುವುದುಂಟು.

ಶುನಶ್ಶೇಪ—ನೂರಾರು ನಾಯಿಗಳನ್ನು ಸಾಕುವವ.

ಶುನಶ್ಶೇಫ—ಹಿರಿಯ ಮಗನೂ ಅಲ್ಲ, ಕಿರಿಯ ಮಗನೂ ಅಲ್ಲ, ನಡುವಣ ಮಗ; ಪಾಪ! ಬಲಿಹಾಕಿ ಬಿಡ್ತಾರೆ ಇವನನ್ನು, ತಾಯ್ತಂದೆಗಳು.

ಶುಷ್ಕೋಪಚಾರ—ಒಣಮಾತಿನ ಆದರ.

ಶೃಂಗಾರ ಕವನ—ಬವಣೆಗೊಂಡು ಹದಿನೆಂಟು ಬಣ್ಣನೆ ಮಾಡುವುದು (ಹೊನ್ನಮ್ಮ).

ಶೋಕ ಮರ್ಯಾದೆ—ಎರಡು ನಿಮಿಷಗಳ ಕಾಲ ಎದ್ದು ನಿಂತು, ಸತ್ತವನು ಎಂಥವನು, ಎಂದು ಯೋಚಿಸುತ್ತಿರುವುದು.

ಶೋಕ ಸಂಗ್ರಹ—ಸ್ಮಾರಕ ಲೇಖನಗಳ ಗ್ರಂಥ.
ಶೋಕ ಸಂಗೀತ—ಗೋಳುಕರೆ; ಇದನ್ನು ಹಾಡುವಾಗ ಸಾಮಾನ್ಯವಾಗಿ ತಮ್ಮ ಒಂದು ಕಿವಿಯನ್ನಾದರೂ ಮುಚ್ಚಿಕೊಂಡೇ ಹಾಡುವರು, ಗಮನಿಸಿ.
ಶೋಂಭೇರಿ—ಉಭಯ ಸಂಕಟವೊದಗಿದಾಗ, ಎರಡನ್ನೂ ಅನುಭವಿಸುವವ.
ಶ್ಮಶಾನ—ಜೀವನವೆಂಬ ಮೆರವಣಿಗೆಯ ಗುರಿ.
ಶ್ರಮ—ಆಶ್ರಮ ಜೀವಿಗಳಿದನ್ನರಿಯರಂತೆ.
ಶ್ರಮಜೀವಿ—ಹೆಚ್ಚು ಶ್ರಮಪಡದೆ, ಹಣಪಡೆಯಲು ಶ್ರಮಿಸುವವನು; ಕೈ ಕೆಸರಾದರೂ ಬಾಯಿಗೆ ಮೊಸರನ್ನು ಹಚ್ಚಿಬಿಡುತ್ತಾರೆ. ಯಾರೋ, ಈತನಿಗೆ; ಇವನನ್ನು ಜೀವದಿಂದಿರಿಸುವುದೇ ಹಲವರಿಗೆ ತುಂಬಾ ಶ್ರಮ ಸಾಧ್ಯವಂತೆ.
ಶ್ವಶುರ ಋತು—ಮಾವನ ಮನೆಯಲ್ಲೇ ಬಿಡಾರ ಹೂಡ್ಬೋಣವೆನಿಸುವ ಕಾಲ.
ಶ್ವಾನ—ಒಂದೇ ರಾಗದಲ್ಲಿ ಉದ್ದಕ್ಕೂ ಹಾಡುವವ; ಶ್ವಾನ ಬಲ್ಲುದೇ ರಾಗ ಭೇದಂಗಳಂ—ಎಂಬುದನ್ನು ಗಮನಿಸಿ.
ಶ್ವಾನಪ್ರಸ್ಥ—ವಾನಪ್ರಸ್ಥಾಶ್ರಮದವರು ಸರಪಣಿ ತುದಿಗೆ ನಾಯಿಯನ್ನು ಕಟ್ಟಿ ಹಿಡಿದು ವಾಕಿಂಗ್ ಹೋಗುವಾಗ.
ಶ್ರೀಮಂತರು—ಕೆಲವರು ಹುಟ್ಟು ಶ್ರೀಮಂತರು, ಕೆಲವರು ಗಳಿಸಿ ಶ್ರೀಮಂತರು, ಕೆಲವರು ಶ್ರೀಮಂತರ ಅಳಿಯಂದಿರು; ನಾಯಿಗಳನ್ನು ಮುದ್ದಿಸುತ್ತಾರೆ, ಪಕ್ಕದ ಮನೆಮಕ್ಕಳನ್ನು ಮುದ್ದಿಸುವುದಿಲ್ಲ.
ಶ್ರೀಮತೀಪರಿಣಯ—ಎಲ್ಲ ಪರಿಣಯಗಳೂ ಶ್ರೀಮತೀ ಪರಿಣಯಗಳೇ.
ಶ್ರುತಕೀರ್ತಿ—ಬದುಕಿರುವಾಗಲೇ, ಸತ್ತ ಸುದ್ದಿ ಹರಡಿ, ಶೋಕಸೂಚಕ ಭಾಷಣಗಳನ್ನು ಕೇಳುವ ಪುಣ್ಯ ಪಡೆದವರು.

## ಷ

ಷಣ್ಮುಖ—ಮುಖ ನೋಡಬಾರದು, ಎನಿಸುವವ (ಆಂಗ್ಲ ಕನ್ನಡದಲ್ಲಿ).
ಷರಟುತನ—ಕೆಂಪು, ಕರಿ, ಬಿಳಿ, ಊದಾ ಇತ್ಯಾದಿ ಷರಟುಗಳನ್ನು ಧರಿಸಿದ ಪಾರ್ಟಿಗಳ ನಡತೆ.
ಷರಾಯಿ—ಕಾಲುಕುಪ್ಪಸ.

ಷೀಯಾಳಿಸಿ—ಹೀಯಾಳಿಸಿ ಎಂಬುದರ ಸ್ತ್ರೀಲಿಂಗ.

ಷೂರ್ಟಿ—ರಿಕ್ತಹಸ್ತದವನಿಗೆ ತ್ಯಕ್ತ ಹಸ್ತಕೊಡುವವ.

ಷೆಡ್ಡಕ—ಮೋಟಾರ್ ಷೆಡ್ಡನ್ನು ಬಾಡಿಗೆಗೆ ತೆಗೆದು ಅಲ್ಲಿ ಸಂಸಾರ ನಡೆಸುವವ.

## ಸ

ಸ—ಸಂಗೀತದ ಮೂಲ.

ಸರ್ಕಶಜೀವನ—ಲಾಗಜೀವನ.

ಸರ್ಕಾರ—ಆಧುನಿಕ ಮೂರ್ತಿಪೂಜಾ ವಿಧಾನ; ಮಣ್ಣಿಂದ ಮಂತ್ರಿ ಮಾಡಿ, ಐದು ವರ್ಷ ಆರಾಧಿಸಿ, ಮತ್ತೆ ಮಣ್ಣುಗೂಡಿಸುವ ವಿಧಾನ.

ಸಕುನ್ನಿ—ನಾಯಿ ಸಂಗಡ ವಾಕಿಂಗ್ ಹೋಗುವವ.

ಸಕುಂತಲೆ—ಕುಂತಲವಿರುವವಳು.

ಸಕೇಸಿ—ಕೇಸಿನ ಕಟ್ಟಿನೊಂದಿಗೆ ಪಟ್ಟಣಗಳಿಗೆ ಬರುವ ಹಳ್ಳಿ ರೈತ, ಕಕ್ಷಿಗಾರ.

ಸಂಕಟ—ತಮ್ಮಷ್ಟು ಸಂಕಟಪಡುವವರು ತಮ್ಮ ದೃಷ್ಟಿಗೆ ಬೀಳದಿರುವಾಗ; ತಾವು ಬಳಸಬಹುದಾದ್ದಕ್ಕಿಂತ ಹೆಚ್ಚು ಶ್ರೀಮಂತತನ ಒದಗಿದಾಗ.

ಸಂಕಷ್ಟಚತುರ್ಥೀ—ವ್ರತ.

ಸಗಣಿ— ದನ ತಿನ್ನುವವನು ಸಗಣಿ ಮೇಲೆ ಆಣೆ ಇಡುತ್ತಾನೆ, ಸುಲಭವಾಗಿ.

ಸಂಗೀತಾಭಿಮಾನಿ— ಕೋಣೆಯೊಳಗೆ ಹೆಂಗಸು ಹಾಡುತ್ತಿರುವಾಗ ಬಾಗಿಲು ಸಂದಿಗೆ ಕಿವಿಯನ್ನಿಡುವವ.

ಸಂಗ್ರಾಮ—ಗ್ರಾಮಗಳಲ್ಲಿನ ದಿನದಿನದ ಪರಿಸ್ಥಿತಿ.

ಸಂಚಿತಕರ್ಮ— ಕೆಟ್ಟು ಹೋದದ್ದೆಲ್ಲ ಸಂಚಿತಕರ್ಮ, ಸುಟ್ಟು ಹೋದದ್ದೆಲ್ಲ ಆಗಾಮಿಕರ್ಮ; ನಷ್ಟವಾದದ್ದೆಲ್ಲ ಪ್ರಾರಬ್ಧಕರ್ಮ.

ಸಜ್ಜನರು—ಊರನ್ನು ರಕ್ಷಿಸುವ ಭಟರು ಇವರಂತೆ; ದುರ್ಜನರು ಪ್ರಾಮುಖ್ಯತೆಗೆ ಬರುವುದು ಇವರಿಂದಲೇ.

ಸಂಜೆ— ಸಂಜೆ ಹೊತ್ತಿಗೆ ಮೂರು ಮೊಳ ನೆಯ್ದಾಗದಿದ್ದರೆ, ಕತ್ತಲೇಲಿ ಪೋಸದ ಅಳತೆ ಮಾಡಿ ಮಾಡಿ ಮಾರಿದರಾಯಿತು.

ಸಂಜೀವನಿ—ಸಂಜೆ ಹೊತ್ತು ಪಾರ್ಕಿಗೆ ಹೋಗುವಾಕೆ.

ಸರ್ಟಿಫಿಕೆಟ್— ಎಂಥವನಿಗೂ ಇದನ್ನು ಬರೆದುಕೊಡುವವರು ಸಿಕ್ಕೇ ಸಿಗುತ್ತಾರೆ.

ಸಟ್ಟಕ—ಇದನ್ನಾಡಿಸುವುದೂ ಒಂದು ನಾಟಕ.

ಸಟ್ಟುಗ— ಅಟ್ಟಡುಗೆಯ ರುಚಿಯನ್ನು ಒಲ್ಲದ ಪಾಪಿ.

ಸಂಡೇಪಿತುಃ—ಭಾರಿ ನಗರಗಳಲ್ಲಿನ ಕಾರ್ಖಾನೆ ಕಚೇರಿ ಇತ್ಯಾದಿಗಳ ನೌಕರ.

ಸಣ್ಣ ಮೋರೆ— ಬಣ್ಣ ಮೋರೆ ಕೂಡದು ಎಂದಾಗ, ಮೋರೆ ಸಣ್ಣ ಮೋರೆಯಾಗುತ್ತದೆ.

ಸತ್ಪಾತ್ರ— ಸತ್ಪಾತ್ರ ದೊರೆತಿಲ್ಲ ಎಂಬುದೇ ದಾನಮಾಡದವರ ಸೋಗು.

ಸತಿ— ಸತಿ ಸಪ್ತಮಿ; ಅಂದರೆ, ಮಿಕ್ಕ ಆರು ಯಾವುವು ? ಅರಿಷಡ್ವರ್ಗಗಳಿರಬಹುದೆ ?

ಸತಿ—ಆಗಲುಂ ಉಲಿವ ಸತಿ ಹೊಲ್ಲ (ಸರ್ವಜ್ಞ).

ಸತಿಯರು— ಪತಿಯರ ಕಷ್ಟಗಳನ್ನು ಅರ್ಧವಾಗಿಸುವರು, ಸುಖವನ್ನು ಇಮ್ಮಡಿಸುವರು, ಖರ್ಚನ್ನು ಮುಮ್ಮಡಿಸುವರು.

ಸತ್ತಿಗೆ— ಸತ್ತಿಗೆ, ಅರ್ಥ ಬೋಯಿಗೇನೇ.

ಸಂತತಿ—ನಾಳೆ ನಮ್ಮನ್ನು ಹೀಯಾಳಿಸಿ ಮೂಲೆಯಲ್ಲಿ ಕೂರಿಸುವ ಮಕ್ಕಳೂ, ಮರಿಮಕ್ಕಳೂ.

ಸಂತಾನನಿರೋಧ— ನಮ್ಮ ತಾತ-ಮುತ್ತಾತಂದಿರು ಈ ಪದ್ಧತಿಯನ್ನು ಅನುಸರಿಸಿದ್ದರೆ, ನಮಗೆ ತಾಪತ್ರಯವೇ ಇರುತ್ತಿರಲಿಲ್ಲ.

ಸಂತೆ— ಗಂಟುಕಳ್ಳರ ಕೂಟ.

ಸಂತೋಷ— ಉಳಿದವರಿಗಾಗುವ ಕಷ್ಟಪರಂಪರೆಗಳಿಂದ ನಮ್ಮಲ್ಲುತ್ಪನ್ನವಾಗುವ ಪ್ರತಿಕ್ರಿಯೆ; ಸಂತೋಷವೇ ಯೌವನ.

ಸತ್ಯ—ವ್ಯಾಪಾರ ಕ್ಷೇತ್ರಗಳಲ್ಲಿ ಸಿಗದ ವಸ್ತು; ಯುದ್ಧ ಪ್ರಾರಂಭವಾದಾಗ, ಮೊದಲು ಹತವಾಗುವುದು ಇದೇ; 'ಸತ್ಯವಂತನ ಹೆಂಡತಿ ಬೆತ್ತಲೆ' (ಗಾದೆ).

ಸತ್ಯನಾರಾಯಣಪೂಜೆ—ಸಾವಿರ ಸುಳ್ಳು ಹೇಳಿ, ಒಂದು ಸತ್ಯನಾರಾಯಣ ಪೂಜೆ ಮಾಡು; ಅದುವರೆಗೂ ಎಣಿಸುತ್ತಾ ಹೋಗು.

ಸತ್ಯಮಾರ್ಗ— ಬಹು ಸುಲಭವಾದ ಮಾರ್ಗ; ಏಕೆಂದರೆ, ಅಲ್ಲಿ ಇತರ

ಪ್ರಯಾಣಿಕರ ಗಲಾಟೆಯೇ ಇರುವುದಿಲ್ಲ.

ಸತ್ಯಲೋಕ—ಮರ್ತ್ಯಲೋಕಕ್ಕೂ ಇದಕ್ಕೂ ಏನೇನೂ ಸಂಬಂಧವಿಲ್ಲ.

ಸದಾರ—ಆದ್ದರಿಂದ, ಸಮರ್ಥ, ಶಕ್ತಿವಂತ; ಇವನಿಗೆ ಮೂಗುದಾರ ತಪ್ಪಿದ್ದೇ ಅಲ್ಲ.

ಸರ್ದಾರ್—ಸಾವಿರ ಕುದುರೆ ಸರ್ದಾರನಾದರೂ, ಮನೆಗೆ ಬಂದರೆ ಕಡಿವಾಣ.

ಸದ್ದು—ಸದ್ದನ್ನಡಗಿಸಲು ಜನ, ಸದ್ದು ಸದ್ದು, ಎಂದು ಸದ್ದು ಮಾಡುತ್ತಾರೆ.

ಸಂದೇಹ—ಸವಿಯೊಳಗೆ ಬೆಲ್ಲವೋ. ಬೆಲ್ಲದೊಳಗೆ ಸವಿಯೋ, ಸವಿಯು ಬೆಲ್ಲಗಳೆರಡೂ ನಾಲಗೆಯೊಳಗೋ, ನಾಲಗೆ–ಸವಿಗಳೆರಡೂ ಮನ-ದೊಳಗೊ, ಮನ–ನಾಲಗೆಗಳೆರಡೂ ಮಾಯೆಯೊಳಗೋ–ಇತ್ಯಾದಿ ಕರಕರೆಯಿಂದ ಬೆಲ್ಲ ತಿನ್ನದೆ ಬಳಲುವುದಕ್ಕೆ ಇದೇ ಕಾರಣ.

ಸಂಧಿ—ಯುದ್ಧ ಮುಂದುವರಿಸಲು, ತಾಕತ್ ಪಡೆಯಲು ಅವಕಾಶ ದೊರ-ಕಿಸಿಕೊಳ್ಳುವುದು.

ಸನತ್‌ಕುಮಾರಿ – ಹಲವು ಸಿನಿಮಾ ತಾರೆಯರೂ ನೃತ್ಯಕೋವಿದೆಯರೂ ಎಂದೆಂದಿಗೂ ಕುಮಾರಿಯರೇ.

ಸನ್ನಿಬದ್ಧ – ಸನ್ನಿಯಿಂದ ನರಳುವವ.

ಸನ್ಯಾಸಿ—ಮದುವೆಯಾದವನನ್ನು ನೋಡಿ ಕೊರಗುವವ.

ಸಪ್ತಸ್ವರಗಳು—ಜಟ್ಟಿ ಕಾಳಗಕ್ಕೆ ಇಳಿಯುವ ಮಲ್ಲರು (ಪಂಪ).

ಸಪ್ಪನ್ನೈವತ್ತೆರು—ಭಾರತದ ಇಂದಿನ ಛಪ್ಪನ್ನೈವತ್ತಾರು ದೇಶಗಳು.

ಸಪಿಂಡ—ಅದೇ ಖಾನಾವಳಿಯಲ್ಲಿ ಊಟಮಾಡುವವ.

ಸಂಪನ್ನ—ಸಾವಿರ ಸಾಲವಾದರೇನೇ ಸಂಪನ್ನ; ಸರಿಯಾದ ಅಗಲ.

ಸಂಪ್ರದಾಯಸ್ಥ—ಪ್ರಗತಿಶೀಲರ ಪರಮ ಶತ್ರು.

ಸಂಪಾದಕ—ನೂರಾರು ಲೇಖಕೋತ್ತಮರಿಗೆ ಮಾನಭಂಗ ಮಾಡುವವ; ತಮ್ಮ ಖುಷಿಗಾಗಿಯೇ ಇವರು ಲೇಖನ ಬರೆಯುವುದು, ನಮ್ಮ ಖುಷಿ ಮಾಡಲು ಅಲವೆಂಬುದು ಆ ಲೇಖನ ಓದಿದರೆ ಗೊತ್ತಾಗುವುದು.

ಸಂಪಾದನೆ—ಇದನ್ನು ಬಲಪ್ರಯೋಗದಿಂದಲೂ ಕಳ್ಳತನದಿಂದಲೂ ಮಾಡಬಹುದು.

ಸಂಪಿಗೆ—ಸಂಪಿಗೆ ಕಂಪು ಎಂಟು ಗಳಿಗೆ, ನಂಟರ ಗುಣ ಅರ್ಧ ಗಳಿಗೆ (ಗಾದೆ).

ಸಂಪುಟ—ತಿಂಗಳು ತಿಂಗಳಿಗೂ ಸಂಕಟ.

ಸಂಬಳ—ಸಂಬಳದಲ್ಲಿ ಬಿದ್ದು ಒದ್ದಾಡುವ ನೊಣಗಳನ್ನು ನೋಡಿ.

ಸಂಬಾರ—ಇದನ್ನು ಅರೆಯುವ ಮೊದಲು ಕೋಳಿಯನ್ನು ಕೇಳಹೋಗಬೇಡಿ.

ಸಭ್ಯತೆ—ನಡೆವಂತೆ ನುಡಿಯಲು ನಮಗಿರುವ ಅಡ್ಡಿ: ಅಸಭ್ಯರ ಸೋಗು.

ಸಭ್ಯಸ್ಥ—ಮನಃಪೂರ್ವಕವಾಗಿ ಅಲ್ಲದೆ, ಮತ್ತೊಬ್ಬರಿಗೆ ಅಪಮರ್ಯಾದೆ ಮಾಡದವ.

ಸಭ್ಯರು—ಆನೆಗೂ ಚಡ್ಡಿ ಹೊಲೆದೇಬಿಡಬೇಕೆಂದು ಹಠ ತೊಡುವ ಅಶ್ಲೀಲ ದ್ವೇಷಿಗಳು.

ಸಭ್ಯತೆ—ಅಸಭ್ಯರ ಮೌನವ್ರತ.

ಸಭೆ—ಒಬ್ಬರ ಬುರುಡೆಗಾಗಿ ಕಾದು ಕುಳಿತಿರುವ ಬುರುಡೆಗಳ ಸಾಲು.

ಸಂಭಾಷಣೆ—ಗಿಲೀಟು ಸಾಮಾನುಗಳ ಹಂಚಿಕೆ.

ಸಂಭೋಷಿಸು—ಭೇಷ್—ಎಂದು ಹೇಳಿಸು.

ಸಮಕಾಲೀನ—ಎರಡು ಕಾಲುಗಳೂ ಸಮವಾಗಿರುವುದರಿಂದ, ಒಂದೇ ಕಾಲಿನ ಮೇಲೆ ನಿಲ್ಲಬೇಕಾದ ಕಷ್ಟವಿಲ್ಲದ ಪುಣ್ಯಾತ್ಮ.

ಸಮತಾವಾದಿ—ಇತರರೆಲ್ಲರೂ ತನ್ನಂತೆಯೇ ದರಿದ್ರರೂ ದಡ್ಡರೂ ಆಗಬೇಕೆಂದು ವಾದಿಸುವ ಸಮಾಜ ಸೇವಕ.

ಸಮ್ಮತಾವಾದ—ದೇಶದಲ್ಲೆಲ್ಲ ಒಂದೇ ಪಕ್ಷ ಇರತಕ್ಕದ್ದು, ಆ ಪಕ್ಷದ ನಾಯಕ ಹೇಳಿದ್ದೇ ಎಲ್ಲರಿಗೂ ಸಮ್ಮತವಾಗಿರತಕ್ಕದ್ದು, ಎಂಬ ವಾದ.

ಸಮರ್ಥ—ಹಿಂದುಳಿದವ.

ಸಮಯ ಸ್ಫೂರ್ತಿ—ಸ್ನಾನದ ಮನೆಯೊಳಗೆ ನುಗ್ಗಿದಾಗ, ಅಲ್ಲಿದ್ದ ಮಹಿಳೆಯನ್ನು ಕಾಣುತ್ತಲೂ, ಹೊರಕ್ಕೆ ಧಾವಿಸುತ್ತ, ಕ್ಷಮಿಸಿ ರಾಯರೆ, ಎಂದು ಹೇಳುವುದು.

ಸಮಾಧಾನ—ನಮಗಿಂತ ದೊಡ್ಡವರು ಎಂದು ನಾವು ತಿಳಿದಿರುವವರ ಸಮೀಪವರ್ತಿಯಾಗಿ ಕೊಂಚ ಕಾಲ ಪಳಗಿದಾಗ, ನಾವು ಅವರಿಗೇನೂ ಕಡಮೆ ಇಲ್ಲ, ಎಂದು ನಮ್ಮಲ್ಲುಂಟಾಗುವ ಅರಿವು.

ಸಮಾಜ ಸುಧಾರಕರು—ಬಾಲ ಕಳೆದುಕೊಂಡ ನರಿಗಳು; ತನ್ನ ಮನೆಯನ್ನು ಸುಧಾರಿಸಲಾರದೆ, ಹೊರಗಿನವರನ್ನು ಸರಿಪಡಿಸಲು ಹೊರಟಿರುವ

ವೀರರು; ಆಧುನಿಕ ಯುಗದ ಕ್ರೂರಿಗಳು, ದಯೆಯ ಸೋಗು ಹಾಕಿಕೊಂಡವರು.

ಸಮಾಜಸೇವೆ— ಸ್ವಕರ್ಮದಲ್ಲಿ ಆಸಕ್ತಿ ಇಲ್ಲದವರು ಎಬ್ಬಿಸುವ ಧೂಳು.

ಸಮಾರಂಪ— ಸಾಮಾನ್ಯವಾಗಿ ಸಮಾರಂಭಗಳೆಲ್ಲ ಹೀಗಾಗುವುದೇ ಹೆಚ್ಚು.

ಸಮಿತಿ—ಸಮಸ್ಯೆಗಳನ್ನು ಸಮರ್ಪಕವಾಗಿ ಕೊನೆಗಾಣಿಸಲು ಸಮಿತಿ ನಿಯಮಿಸಿ, ಅವುಗಳ ಪರಿಹಾರೋಪಾಯಗಳನ್ನು ಇತ್ಯರ್ಥ ಮಾಡಲು ಸಾಧ್ಯವಿಲ್ಲವೆಂದು ಸೂಚಿಸುವುದೇ ಸುಲಭೋಪಾಯ; ಎಂಥ ಉದ್ಯಮಕ್ಕೂ ಟಾಂಗ್ ಕೊಡುವ ಉಪಾಯ.

ಸಮುದ್ರ—ಪಾಪಿ ಸಮುದ್ರಕ್ಕೆ ಹೋದರೂ ದೇವರು ಅವನನ್ನು ಕಾಪಾಡುತ್ತಾನೆ; ನೀರು ಮೊಣಕಾಲು ಎತ್ತರಕ್ಕೆ ಮಾತ್ರ ಇರುತ್ತದಂತೆ; ಸಮುದ್ರ ಚಿಕ್ಕದಾದರೂ ಅದರ ಪಾತ್ರೆ ಇದ್ದಷ್ಟು ನೀರು ತುಂಬಿರುತ್ತದೆ.

ಸಮ್ಮೇಳನ—ಒಬ್ಬ ನಾಯಕನನ್ನು ಅವನ ಹಿಮ್ಮೇಳದವರು ಕೊಂಡಾಡುವ ಪ್ರಹಸನ.

ಸಂಯಮನಿ—ಸಂಯಮ ಇರುವವರು ಇಲ್ಲಿಗೆ ಹೋಗಬೇಕಾಗಿಯೇ ಇಲ್ಲ.

ಸರಸ್ವತಿ—ಬೊಮ್ಮನಾ ಸತಿಗೆ ಮೂಗಿಲ್ಲ (ಸರ್ವಜ್ಞ), ಏಕೆಂದರೆ, ಸಾಹಿತಿಗಳು ಆಕೆಯ ಮೂಗನ್ನು ಮುರಿದು ಬಿಟ್ಟಿದ್ದಾರೆ.

ಸರಿ—ಮೂರ್ಖರೊಂದಿಗೆ ಮಾತಾಡುವಾಗ ಸರಿ ಎನ್ನುತ್ತ ಸರಿದುಬಿಡುವುದೇ ಮೇಲು.

ಸರೋಜ—ಗುಲಾಬಿ ಹೂ ಮುಡಿದಿರುವವಳು.

ಸರೋಜಪಾಣಿ—ಗುಲಾಬಿಯನ್ನು ಕೈಯಲ್ಲಿ ಹಿಡಿದಿರುವವ.

ಸಲಹೆ—ಪ್ರಪಂಚದಲ್ಲಿ ಅತೀ ಅಗ್ಗದ ವಸ್ತು; ಸಲಹೆ ಕೊಡ ಹೋಗಬೇಡಿ. ಇದೇ ನಮ್ಮ ಸಲಹೆ.

ಸಲಾಮು—ಇದು ಡೊಂಕಾಗಿದ್ದರೆ, ಹೆಚ್ಚು ಜನಪ್ರಿಯ.

ಸವತಿ—ಈಕೆಯ ಗಂಡ ಸಾಯಲಿ ಎಂದು ಹೇಳಲೇಕೂಡದು.

ಸವ್ಯಚಾಚಿ— ಎರಡುಕೈಗಳನ್ನೂ ಚಾಚಬಲ್ಲವ–ಸಮಯ ಬಿದ್ದರೆ.

ಸರ್ವೇಜನಾಃ–ಸರ್ವೇ ಖಾತೆಯ ನೌಕರರು ಕಾಡುಮೇಡುಗಳಲ್ಲಿ ಅಲೆದು ತಮ್ಮ ಕೆಲಸ-ಜರೂರಿ ಹೆಚ್ಚಾಗಿದ್ದುದರಿಂದ, ಹಿಂದಿನ ಸರ್ಕಾರ ಅವರಿಗೋಸ್ಕರ ವಿಶೇಷ

ಪ್ರಾರ್ಥನೆ ಸಲ್ಲಿಸುತ್ತಿದ್ದವರು ; ಉದಾ : ಸರ್ವೇಜನಾಃ ಸುಖಿನೋ ಭವಂತು.

ಸಶೇಷ—ಕಥೆ ಮುಗಿಸುವುದು ಹೇಗೆಂದು ತಿಳಿಯದಿದ್ದರೆ, ಸಶೇಷ ಎಂದು ಬರೆದು, ಮುಂದೆ ಸ್ಫೂರ್ತಿಗಾಗಿ ಕಾಯಬಹುದು.

ಸಂಶಯಾತ್ಮ—ಅಡ್ಡಗೋಡೆ ಮೇಲಿನ ಭೂಪ.

ಸಂಸ್ಕೃತಿ—ಸುಣ್ಣ ಬಣ್ಣ.

ಸಂಸಾರ—ಸಂಸಾರವಾದದ್ದಕ್ಕೆ ಸೊನ್ನೆ ಬೆರೆತರೆ; ಒಬ್ಬರ ಯಜಮಾನಿಕೆಯ ಆಡಳಿತದಲ್ಲಿ ಒಬ್ಬ ಗಂಡಸೂ ಹಲವು ಮಕ್ಕಳೂ ಬಾಳಿ ಬಳಲುವ ಪರಿಸ್ಥಿತಿ; ಈಸಬಲ್ಲವಗೆ ಎದೆ ಯುದ್ಧ.

ಸಂಸಾರ ಚಕ್ರ—ಮನೆಯವರನ್ನೆಲ್ಲ ತುಂಬಬಲ್ಲ ಮೋಟಾರುಗಾಡಿ.

ಸಂಸ್ಥೆ—ಒಂದು ತೆರನ ಸಂತೆ; ಸಂಸ್ಕೃತರಲ್ಲಿ ಸಂಸ್ಥೆ, ಅಸಂಸ್ಕೃತರಲ್ಲಿ ಅದೇ ಸಂತೆಯಾಗಿ ರೂಪಾಂತರ ಹೊಂದುತ್ತದೆ.

ಸಹಗಮನ—ಗಂಡನೊಂದಿಗೆ ವಾಕಿಂಗ್ ಹೊರಡುವಿಕೆ.

ಸಹತಪಿಸುವುದು—ಭೂಕಂಪ, ಬರಗಾಲ ಇತ್ಯಾದಿ ಸಂಕಟಗಳು ಒದಗಿದಾಗ, ಅವುಗಳನ್ನು ಕುರಿತು ಹೃದಯವಿದ್ರಾವಕವಾದ ಕಥೆ-ಕವನ-ಕಾದಂಬರಿಗಳನ್ನು ಬರೆದು ಮಾರುವುದು.

ಸಹದೇವ—ಬಹುಪತ್ನೀ ವಿವಾಹ ಪದ್ಧತಿಯ ಸಂಸಾರಗಳಲ್ಲಿ, ಗಂಡನಿಗೆ ಈ ಹೆಸರುಂಟು.

ಸಹದೇವಿ—ಸಹದೇವನ ಹೆಂಡತಿ, ಅರ್ಥಾತ್ ಸವತಿ.

ಸಹನೆ—ಉಳಿದವರ ಏಳಿಗೆಯನ್ನು ಕಂಡು ತಾಳ್ಮೆಯಿಂದ ಇರುವಿಕೆ.

ಸಹಪಾಠಿ—ಒಂದೇ ಮಾಸ್ತರ ಭುಜಬಲದಿಂದ ಚರ್ಮ ಹದ ಮಾಡಿಸಿಕೊಂಡವ.

ಸಹಲಾಠಿ—ಒಂದೇ ದೊಂಬಿಗೆ ಸೇರಿದ ಇಬ್ಬರು.

ಸಹಾಪರಾಧಿ—ಕಕ್ಷಿಗಾರ ತಪ್ಪಿತಸ್ಥನೆಂದು ತಿಳಿದರೂ, ಆತನನ್ನು ಉಳಿಸಲು ಆತ ತಪ್ಪು ಮಾಡಿಲ್ಲವೆಂದು ವಾದಿಸುವ ಲಾಯರು.

ಸಾಕು—ಈ ಮಾತನ್ನು ಹೇಳುವುದು ಬಹು ಕಷ್ಟ.

ಸಾಕುನಾಯಿ—ಹೊಸಬರು ಬಂದ ಕೂಡಲೇ ಹೆದರಿ ಮನೆಯೊಳಕ್ಕೆ ನುಗ್ಗಿ ಮೇಜಿನ ಕೆಳಗೆ ಅವಿತುಕೊಂಡು ನಮಗೆ ತಿಳಿದಳಿಕೆ ಕೊಡುವ ಪ್ರಾಣಿ.

ಸಾಕ್ಷಿ—ಕಕ್ಷಿಗಾರನ ಕಣ್ಣಲ್ಲಿ ಸಾಕ್ಷಿಗಾರನ ಮೇಲೆ; ಲಾಯರಾಫೀಸುಗಳಲ್ಲಿ

ಸಾಕ್ಷಿಗಾರನ ಶಿಕ್ಷಣ ನಡೆಯುತ್ತಿರುತ್ತದೆ.

ಸಾಕ್ಷಿಗಾರ—ಸಾಲಗಾರ ಸುಮ್ಮನಿದ್ದರೂ, ಸಾಕ್ಷಿಗಾರ ಬಿಡ.

ಸಾಂಗ್‌ಮಯ—ಕೀಳುದರ್ಜೆಯ ಸಿನಿಮಾ ಚಿತ್ರಗಳು— ಮಾತೆತ್ತಿದರೆ ಮ್ಯೂಜಿಕ್ಕು.

ಸಾತಿವ್ರತ್ಯ—ಪಾತಿವ್ರತ್ಯವನ್ನು ನೋಡಿ.

ಸಾಧು—ಹಸು.

ಸಾಮರ್ಥ್ಯ—ಇದು ವಿದ್ಯಾರ್ಥಿಯಲ್ಲಿದೆ ಎಂದು ಉಪಾಧ್ಯಾಯರು ಒಪ್ಪಿ-ಕೊಳ್ಳುವುದೇ ಇಲ್ಲ.

ಸಾಮಾನ್ಯಮನುಷ್ಯ—ತನಗಾಗಿಯೇ ಜಗತ್ರಯ ಸೃಷ್ಟಿಯಾಗಿರುವುದು, ಎಂದು ಹೇಳಿ ಹೊರಟಿರುವವ.

ಸಾಮುದ್ರಿಕಾ—ಕೈ ತೋರಿಸಿ ಅವಲಕ್ಷಣ ಅಲ್ಲ ಅಂತ ಅನ್ನಿಸಿಕೊಂಡವನು, ಜಾಣ.

ಸಾಯುಷ್ಕರ್ಮ—ವೈದ್ಯಶಾಸ್ತ್ರಪ್ರಯೋಗ; ತಲೆ ಬೋಳಿಸುವ ಪ್ರಸಂಗ.

ಸಾರಮೇಯ—ಗ್ರಾಮಸಾರವನ್ನು ಮೇಯುವ ಪ್ರಾಣಿ.

ಸಾರುವ ಭೌಮತ್ವ—ಬರೀ ಪ್ರಚಾರದಿಂದಲೇ ತನ್ನ ಪ್ರಭಾವವನ್ನು ಪರದೇಶಗಳ ಮೇಲೆ ಬೀರುವ ರಾಷ್ಟ್ರ.

ಸಾಲ—ಸಾಲ ಪಡೆದು ಕೊಡದೇ ಇದ್ದರೆ, ಮುಂದಿನ ಜನ್ಮದಲ್ಲಿ ಪುತ್ರ ಭಾಗ್ಯ ಸಿದ್ಧ; ಶ್ರೀಮಂತರ ಬಂಡವಾಳ; ಸಾವಿರತನಕ ಸಾಲ, ಆಮೇಲೆ ಬಂಡವಾಳ.

ಸಾಲಕ್ಷೇಪ—ಸಾಲದಿಂದಲೇ ಕಾಲಕ್ಷೇಪಮಾಡುವಿಕೆ.

ಸಾಲಗಾನ— ಸಾವಿರತನಕ ಸಾಲಮಾಡಿ, ಆಮೇಲೆ ಲೋಲನಾಗಿ, ಆ ಲೋಲ ಮಾಡುವ ಗಾನ.

ಸಾಲಗ್ರಾಮ—ಹೌಸ್ ಬಿಲ್ಡಿಂಗ್ ಸೊಸೈಟಿಗಳ ಸಹಾಯದಿಂದ ಕಟ್ಟಿದ ಮನೆಗಳ ಸಾಲು.

ಸಾಲಭೈರವ—ಸಾಲವನ್ನು ಹಿಂದಕ್ಕೆ ಕೊಡಬೇಕೆಂದು ಹಿಂಸಿಸುವವ.

ಸಾಲಂಕೃತ— ಕನ್ಯಾದಾನಗಳನ್ನೆಲ್ಲ ಸಾಲಂಕೃತವಾಗಿಯೇ ಮಾಡುವ ಪದ್ಧತಿ.

ಸಾಲುಗಾರ—ಕ್ಯೂ ಪದ್ಧತಿಗೆ ಬಗ್ಗಿದವ.

ಸಾಲುಮರ—ಬಸ್ಸು ಲಾರಿ ಇತ್ಯಾದಿಗಳನ್ನು ನಿಲ್ಲಿಸಲು, ಬ್ರೇಕ್ ಕೆಟ್ಟು ಹೋಗಿರುವಾಗ, ಒದಗುವ ಏರ್ಪಾಟು.

ಸಾಲೋಗರ—ಸಾಲ ತಂದು ಮಾಡಿದ ಒಂದು ಬಗೆಯ ಹಾಲೋಗರ.

ಸಾವಿಗೆ—ಇಂಡ್ಯಾ ದೇಶದ ಮ್ಯಾ ಕರೋನಿ.

ಸಾವು—ಸತ್ತಮೇಲೆ ಗೊತ್ತಾಗುತ್ತೆ, ಸೆಟ್ಟಿ ಒಳ್ಳೆಯವನೋ ಕೆಟ್ಟವನೋ, ಅಂತ. ಟೊಳ್ಳು ಗಟ್ಟಿಯನ್ನು ತೂರಿ ತೋರುವ ಗಾಳಿ.

ಸಾಹಿತ್ಯ—ಕೇವಲ ಅಂತಃಪ್ರೇರಣೆಯಿಂದ ಇದನ್ನು ಸಾಹಿತಿಗಳು ಸೃಷ್ಟಿಸು-ವುದರಿಂದ ಅನ್ಯಾಯವಾಗಿ ಅವರನ್ನು ದೂರಿ ಪ್ರಯೋಜನವಿಲ್ಲ: ಒಂದು ಬಗೆಯ ಗೋಳುಕರೆ; ಕೇವಲ ಆತ್ಮತೃಪ್ತಿಗಾಗಿಯೇ ಸಾಹಿತಿಗಳು ಇದನ್ನು ಬರೆಯುವುದರಿಂದಲೇ ನಮಗೆ ಗೋಳು—ನಮ್ಮ ತೃಪ್ತಿಗಾಗಿ ಬರೆಯುವವರು ಬಹಳ ಕಡಮೆ.

ಸಾಹುಕಾರ—ಸಾಲಪಡೆದವರಿಗಿಂತ ಈತನ ಜ್ಞಾಪಕಶಕ್ತಿ ಬಲು ಚುರುಕು.

ಸಿಗರೇಟು—ತಾರುಣ್ಯದ ಹೆಗ್ಗುರುತು; ನಾಗರಿಕತೆ ಹೊಗೆಯಾಡುತ್ತಿರುವ ಬಗೆ; ಕಾಸನ್ನು ಬೂದಿಮಾಡುವ ವಿಧಾನ.

ಸಿಂಗಲೀಕರು—ಸಿಂಹಳದ್ವೀಪದ ಸಿಂಗಲೀಕರು ಇವರಿರಬಹುದೆ ?

ಸಿಟಿಬಸ್ಸು—ಪಕ್ಕದ ಸೀಟಿನವನು ಕೊಂಡುಕೊಂಡ ಪೇಪರನ್ನು ಕದ್ದೋದಲು ಅನುಕೂಲಿಸುವ ಏರ್ಪಾಟು; ಅನೇಕ ಜಾಹಿರಾತುಗಳನ್ನು ಹೊತ್ತು ಬೀದಿಬೀದಿಗೂ ತಿರುಗುವ ವಾಹನ; ಇದರಲ್ಲಿ ಪ್ರಯಾಣಮಾಡಬೇಕಾದರೆ ಪುಣ್ಯಮಾಡಿರಬೇಕು.

ಸಿಡಿಮದ್ದು—ಗಡಿಗಳನ್ನು ರಕ್ಷಿಸುವ ಪುಡಿ.

ಸಿದ್ಧಪತ್ರೆ—ಶಿವಧ್ಯಾನಕ್ಕಾಗಿ ಹಲವರು ಇದನ್ನು ಉಪಯೋಗಿಸುವರು.

ಸಿದ್ದಿ—ಅಬಿಸೀನಿಯಾ ದೇಶದವನು.

ಸಿದ್ಧಿ—ಪ್ರಯತ್ನದ ಮುಕ್ತಾಯ; ನಿರಾಶೆಯ ಪ್ರಾರಂಭ.

ಸಿದ್ಧೌಷಧ—ತಯಾರಕರಿಗೆ ಶ್ರೀಮಂತಿಕೆಯನ್ನು ಸಿದ್ಧಿಸಿಕೊಡುವ ಔಷಧ.

ಸಿನ್ನಾಣ—ಪಾಪ ಕೆಲಸಮಾಡಿದವನ ದುರಹಂಕಾರ.

ಸಿಸಿಮತಾರೆ—ಅಸಂ–ಗಜಂ–ಗಮ–ಲತೆ.

ಸಿನೀವಾಲಿ—ಒಬ್ಬಳು ಸ್ತ್ರೀ ದೇವತೆ.

ಸಿಂಹಾಸನಾರೋಹಣ—ಒಂದು ಮಹಾ ಸಾಹಸ; ನಾಲ್ಕು ಸಿಂಹಗಳನ್ನು ನಿಲ್ಲಿಸಿ, ಅವುಗಳ ಮೇಲೆ ಪೀಠವನ್ನಿರಿಸಿ, ಅದರ ಮೇಲೆ ಕೂರುವುದು; ಸಿಂಹಗಳಿಗೆ ತಮ್ಮ ಶಕ್ತಿ ಗೊತ್ತಾದ ಕೂಡಲೇ ಅಪಾಯ.

ಸಿಂಹಾಸನತ್ಯಾಗ— ಕಾವೇರಿದಾಗ.

ಸೀತೆ—ಪಂಪರಾಮಾಯಣದ ಪ್ರಕಾರ, ರಾಮನ ತಂಗಿ. ರಾತ್ರಿಯೆಲ್ಲ ರಾಮಾ-ಯಣ ಕೇಳಿ, ಸೀತೆ ರಾಮನಿಗೇನಾಗಬೇಕೆಂದು ಕೇಳಿದವ, ಈ ವಿಷಯವನ್ನರಿತವನಿರಬೇಕು.

ಸೀನ್—ಒಂದುಸೀನ್ ಮುಗಿದಕೂಡಲೇ ಜನ ನಿಟ್ಟುಸಿರು ಬಿಡುತ್ತಾರೆ.

ಸೀನೀರು—ಆದಮನ ಹೆಂಡ; ಅನಾಗರೀಕರ ಪಾನೀಯ.

ಸೀಸು—ನಾಟಕವಾಡುವಾಗ, ಇದುಸರಿಯಾಗಿ ಕೆಳಕ್ಕೆ ಬೀಳುವುದೇ ಒಳ್ಳೆಯ ಶಕುನ; ಕಳ್ಳತನಮಾಡುವಾಗ, ಸೀನು ಉಂಟುಮಾಡಬಾರದು.

ಸೀಮೋಲ್ಲಂಘನ—ಗಡೀಪಾರು ಮಾಡುವಿಕೆ; ಪಾರುಮಾಡಿದ ಗಡಿಯಿಂದ ಮತ್ತೊಂದರೊಳಕ್ಕೆ ನುಗ್ಗುವುದು.

ಸೀರೇವ್ಯಾಪಾರ—ಸೇರುವರಹ ಕೊಟ್ಟರೂ ಇದು ಮಾತ್ರ ಬೇಡ (ಗಾದೆ).

ಸೀಸ—ಈ ತೆರನ ಪದ್ಯವನ್ನು ಕೆಲವರು ನಮ್ಮ ಕಿವಿಗೆ ಹುಯ್ಯುತ್ತಾರೆ.

ಸ್ತ್ರೀಯರು—ಗಂಡಸರಿಗೆ ಏನಾದರೂ ಮಾತು ಹೇಳಿದರೆ, ಒಂದು ಕಿವಿಯಲ್ಲಿ ಹೊಕ್ಕು ಇನ್ನೊಂದರಲ್ಲಿ ಹೊರಟುಹೋಗುತ್ತದೆ; ಆದರೆ, ಸ್ತ್ರೀಯರಿಗೆ ಹೇಳಿದ ಮಾತು, ಎರಡು ಕಿವಿಗಳಲ್ಲೂ ಹೊಕ್ಕು, ಬಾಯಿಂದ ಹೊರಟು ಬಿಡುತ್ತದೆ.

ಸುಂಕ—ಸುಂಕವನ್ನು ಕೊಟ್ಟು, ಸುಂಕದವನ ಸುಖದುಃಖವನ್ನೂ ಕೇಳಿ, ಅದನ್ನು ಪರಿಹರಿಸಲು ಇನ್ನೂ ಕೊಂಚ ತೆರಲೂ ಬೇಕು.

ಸುಂಕದ ಕಟ್ಟೆ—ಇದನ್ನು ದಾಟಲಾರದವರು ಆ ದಡ್ಡತನಕ್ಕಾಗಿ ಹೆಚ್ಚು ದಂಡ ತೆರಬೇಕಾಗುತ್ತದೆ.

ಸುಂಕದವನು—ನಮ್ಮ ಸುಖದುಃಖಕ್ಕೆ ಗಮನ ಕೊಡದವ.

ಸುಖಜೀವನ—'ಆಟಂ ಪಾಟಂ ತೀಟಂ ನೋಟಂ ಕೂಟಂ.'

ಸುಖನಿವಾಸ—ಗರ್ಭವಾಸ.

ಸುಖಪ್ರಾರಬ್ಧ—ಶ್ರೀಮಂತರ ಹಣೆಯ ಬರಹ.

ಸುಗ್ಗಿ—ನಾವು ಮಾಡಿದ ತಪ್ಪುಗಳ ಫಲವನ್ನು ನಾವು ಅನುಭವಿಸುವ ಕಾಲ.

ಸುಗ್ರೀವ—ಚೆನ್ನಾಗಿ ಆಳುವವ.

ಸುತ್ತಳತೆ—ಇದನ್ನು ಸಲಸಲಕ್ಕೂ ಅಳತೆ ಮಾಡುವವನು ದರ್ಜಿ; ಇದಕ್ಕೂ ಆಹಾರಕ್ಕೂ ವೈಜ್ಞಾನಿಕ ಸಂಬಂಧವಿಲ್ಲವಂತೆ; ಆದ್ದರಿಂದ, ಹೆಚ್ಚು ಸುತ್ತಳತೆ ಇರುವವರನ್ನು ದೂಷಿಸಿ ಫಲವಿಲ್ಲ; ಇದನ್ನು ಕರಗಿಸಲು ಚಿಂತೆಯೇ ಉತ್ತಮ ಔಷಧಿ.

ಸುತ್ತಿಗೆ—ರಿವಾಲ್ವರ್.

ಸುದಾಮ—ಕುಚೇಲ, ಅಥವಾ, ಮೇಷ್ಟರು.

ಸುಧಾರಕ—ಇರುವ ಹೊಲಸನ್ನು ತೆಗೆದು ಹೊಸ ಹೊಲಸನ್ನು ತುಂಬಲು ಪ್ರಯತ್ನಿಸುವವ; ನಾಯಿಯ ಬಾಲವನ್ನು ನೆಟ್ಟಗೆ ಮಾಡುವ ನಾಯಕ; ಯಾರನ್ನೂ ಸುಖವಾಗಿ ತೆಪ್ಪಗಿರಗೊಡಿಸದವ; ಆಧುನಿಕ ಯುಗದ ಕ್ರೂರಿ; ಇವನು ಸ್ವರ್ಗಕ್ಕೆ ಹೋಗುವಂತೆಯೇ ಇಲ್ಲ, ಏಕೆಂದರೆ, ಅಲ್ಲಿ ಯಾವುದನ್ನೂ ಅವನು ಸರಿಪಡಿಸಬೇಕಾಗಿಲ್ಲವಲ್ಲಾ.

ಸುಪರ್ಣ—ಒಳ್ಳೆ ಎಲೆ; ಇಸ್ಪೀಟಿನಲ್ಲಿ ಆಸ್.

ಸುಪ್ತಸ್ವರ—ಗೊರಕೆ.

ಸುಭಾಷಿತರತ್ನ ಮಾಲಾ—ಐ. ಎನ್. ಎ. ಪಡೆ.

ಸುಪ್ರಮನೆಯವರು—ಬಾಡಿಗೆ ಕೊಡಲು ನಿರಾಕರಿಸಿ, ಎಷ್ಟು ತಗಾದೆ ಮಾಡಿದರೂ, ಭಂಡಾಟಮಾಡುತ್ತಿರುವವರು.

ಸುರಾರಿ—ಮದ್ಯಪಾನ ನಿರೋಧಿ.

ಸುವರ್ಲೋಕ—ಕೊಳೆ ಕಶ್ಮಲ ತುಂಬಿದ ದೇಶ.

ಸುವರ್ಣ—ಅದರ ಬಣ್ಣಕ್ಕೆ ಮನಸೋತು ಚಿನ್ನವನ್ನು ಸುವರ್ಣ ಎಂದು ಹೆಸರಿಟ್ಟ ದಿನವೇ ಮಾನವನ ಅವನತಿ ಪ್ರಾರಂಭವಾಯಿತಂತೆ.

ಸುವರ್ಣದೃಷ್ಟಿ—ಹಣಹದ್ದುಗಳ ದೃಷ್ಟಿ.

ಸುವರ್ಣನೀತಿ—ಇತರರು ನಮಗೆ ಮಾಡಬೇಕೆಂದಿರುವುದನ್ನು ಮೊದಲೇ ಪತ್ತೆಹಚ್ಚಿ, ಅವರಿಗೆ ನಾವೇ ಮಾಡಿ ಪೂರೈಸುವ ಜಾಣತನ.

ಸುಸ್ವಾದ್—ಹೇಳಿಕೊಟ್ಟು ಹೇಳಿಕೊಟ್ಟು ಸುಸ್ವಾದ ಪೈಲ್ವಾನ, ಅಥವಾ, ಗುರು.

ಸುಸ್ವಾಗತ—ಬಳಲಿ ಬೆಂಡಾಗಿ ಕುಳಿತಿರುವ ಯಜಮಾನ ಅತಿಥಿಗೆ ನೀಡುವ ಸ್ವಾಗತ.

ಸುಳ್ಳು—ಒಳ್ಳೇ ಮಾತಿಗೆ ಸುಳ್ಳೇ ಪ್ರಧಾನ; ನೂರಾರು ಸಲ ಒಂದೇ ಸುಳ್ಳನ್ನು ಗಟ್ಟಿಯಾಗಿ ಕೂಗಿಕೊಂಡರೆ, ಅದೇ ನಿಜವೆನಿಸುತ್ತದೆ; ಸಾವಿರ ಸುಳ್ಳು ಹೇಳಿ ಒಂದು ಮದುವೆ; ಲಕ್ಷ ಸುಳ್ಳು ಹೇಳಿ ಒಂದು ಸಂಸಾರ: ಕೋಟಿ ಸುಳ್ಳು ಹೇಳಿ ಒಂದು ರಾಷ್ಟ್ರ.

ಸೂಜಿಗ—ಆಧುನಿಕ ಆಲೋಪತೀಯ ವೈದ್ಯ.

ಸೂಟು—ಸೂಟಾಗದಿದ್ದರೂ ಅನೇಕರು ಧರಿಸಿ ಮೆರೆಯುವ ವಸ್ತ್ರ ವಿಶೇಷ.

ಸೂತ್ರ-ಧಾರ—ಎರಡೂ ಒಂದೇ.

ಸೂಪರ್ಲಕ್ಕಿ—ಶೂರ್ಪನಖಿ; ಏಕೆಂದರೆ, ಅಷ್ಟಕ್ಕೇ ಬಿಟ್ಟರಲ್ಲಾ, ಪ್ರಾಣ ಸಹಿತ.

ಸೂರ್ಯ—ಬ್ರಿಟಿಷ್ ಸಾಮ್ರಾಜ್ಯದಲ್ಲಿ ಸೂರ್ಯ ಅಸ್ತಮಿಸುವುದೇ ಇಲ್ಲ-ವಂತೆ; ಏಕೆಂದರೆ, ಬೆಳಕಿನಲ್ಲೇ ಅಷ್ಟೊಂದು ಅನ್ಯಾಯ ಮಾಡುವವರು ಕತ್ತಲಲ್ಲಿ ಏನು ಮಾಡುತ್ತಾರೋ ಎಂದು ದೇವರಿಗೆ ಭಯ.

ಸೂರ್ಯೋದಯ—ಆಧುನಿಕ ವಿದ್ಯಾವಂತರೂ, ಶ್ರೀಮಂತರೂ ಎಂದೂ ನೋಡದೆ ಇರುವ ಒಂದು ಸೋಜಿಗ; ಕೋಳಿ ಕೂಗದಿದ್ದರೆ, ಸೂರ್ಯ ಮೂಡುವುದೇ ಅಸಂಭವ, ಎಂದು ಜಂಬದ ಕೋಳಿಗಳು ಹೇಳುತ್ತವೆ.

ಸೆಟ್ಟಿ—ಬೆಟ್ಟ ಬಿಸಿಲಲ್ಲಿ ಬೇಯುತ್ತದಲ್ಲಾ ಎಂದು ಈತ ಅಳುತ್ತಾನೆ—ಎಂದು ಗಾದೆ ಹೇಳುತ್ತದೆ.

ಸೆಂಟು—ಸಾಬೂನನ್ನು ಉಪಯೋಗಿಸದವರು ಇದನ್ನಾದರೂ ಉಪಯೋ-ಗಿಸಿದರೆ ಒಳ್ಳೆಯದು.

ಸೇದುಬತ್ತಿ—ತರುಣ ನಾಗರಿಕರ ವದನಾಲಂಕಾರ.

ಸ್ನೇಹ—ಮನುಜಂಗೆ ಸೇಹವೆಂಬುದು ಪುಸಿಯ ನಚ್ಚು.

ಸೈರಣೆ—ಕೆಳದರ್ಜೆ ನೌಕರರ ಜೀವಾಮೃತ.

ಸೊಕ್ಕಲತನ—ಒಕ್ಕಲತನಕ್ಕೆ ಸೊಕ್ಕೇರಿದಾಗ.

ಸೊಕ್ಕು—ಸೊಕ್ಕಿದ್ದು ಉಕ್ಕುತ್ತದೆ, ಮುಕ್ಕುತ್ತದೆ.

ಸೊಟ್ಟಹಾಸ—ಹಲವರು ನಗುವ ವಿಧಾನ.

ಸೊಂಟ—ಇದು ಬಗ್ಗಿದ್ದರೆ ಬದುಕುವುದು ಸುಲಭ; ಎಂಥ ಕಷ್ಟ ಪರಿಸ್ಥಿತಿಯಲ್ಲೂ ತೂರಿಕೊಳ್ಳಬಹುದು.

ಸೊನ್ನೆ—ಎಂಥ ದಡ್ಡ ಶಿಖಾಮಣಿಗೂ, ಪರೀಕ್ಷಕರು ಕೊಡಲೇ ಬೇಕಾಗಿರುವ ನಂಬರು; ಶುದ್ಧ ಸ್ವದೇಶಿ ಅಂಕಿ.

ಸೊಲ್ಲಾಪ—ಸೊಲ್ಲು ಹೇಳಿಕೊಂಡು ಕಾಲಹರಣ ಮಾಡುವಿಕೆ.

ಸೊಳ್ಳೆ—ದಿಗಂಬರರ ಅನುಚರ; ಗಾನ ಚಂಚು; ಹಾಡಿಕೊಂಡೇ ಕೆಲಸ ಮಾಡುವ ಉತ್ಸಾಹಿ; ಈ ಪ್ರಾಣಿ ಅದರ ಕೆಲಸವನ್ನು ಚೆನ್ನಾಗಿ ಮಾಡ ತೊಡಗಿದರೆ, ನಮಗೆ ಅದರ ಬೆನ್ನನ್ನು ತಟ್ಟಬೇಕೆಂದು ಆಸೆಯಾಗುತ್ತದೆ.

ಸೊಳ್ಳೆಗಾಲ—ರಾತ್ರಿ ಹೊತ್ತು ಇದೇ ಅನೇಕ ಊರುಗಳ ಹೆಸರು.

ಸೊಳ್ಳೆಪರದೆ—ಸಾವಿರಾರು ತೂತುಗಳನ್ನು ತಯಾರಿಸಿ ನಂತರ ಅವುಗಳನ್ನೆಲ ದಾರದಿಂದ ಗಂಟುಹಾಕಿ ಮಾಡಿದ ಒಂದು ಬಗೆಯ ವಸ್ತ್ರವೇ ಇದು–ಎಂದು ಪಾಶ್ಚಾತ್ಯರು ಹೇಳುತ್ತಾರೆ.

ಸೊಳ್ಳೆಸ್ತ್ರೀ—ನಿಮಿಷವೊಂದಕ್ಕೆ ಇಬ್ಬರು ಭಾರತೀಯರನ್ನು ಸಾಯಿಸುವ ಮಾರಿ.

ಸೋತವನು—ಮರಳಿ ಯತ್ನವ ಮಾಡು–ಎಂಬ ಪದ್ಯವನ್ನು ಓದದವನು.

ಸೋಮನಾಥ—ಅಣ್ಣ–ತಮ್ಮಂದಿರು ಹೊಡೆದಾಡಿ ಮಡಿದ ಜಾಗ; ಒಂದು ಸ್ಫೂರ್ತಿದಾಯಕ ಯಾತ್ರಾಸ್ಥಳ.

ಸೋಮಾರಿ—ಸೋಮಾರಿ ಮದುವೆಯಾದರೆ, ಅವನಿಗೆ ದೊರಕುವುದು ಥೀಮಾರಿ (ಗಾದೆ).

ಸೋಮಾರಿತನ—ಸ್ವರ್ಗಜೀವನದ ಗುಣ; ಪರಮಾನಂದಪದ.

ಸೋಮಚಾಕ್ಷಿ—ನಿದ್ದೆಗಣ್ಣುಳ್ಳವಳು.

ಸೋಲಾಯಮಾನ—ಸೋತುಬಿಡುವೆನೋ ಎಂಬ ಭಯ, ಮನವನ್ನು ಆವರಿಸಿದಾಗ.

ಸೋಲಾಹಲ—ಪರೀಕ್ಷೆಯ ಫಲಿತಾಂಶ ಹೊರಬಿದ್ದ ಕೂಡಲೇ ಅನೇಕ ಮನಗಳಲ್ಲಿ, ಹುಡುಗನನ್ನು ಮುಂದೇನು ಮಾಡುವುದು, ಎಂಬ ಚರ್ಚೆ.

ಸ್ತೋತ್ರೇಂದ್ರಿಯ—ಕಿವಿ; ಹಿತ್ತಾಳೆ ಕಿವಿಯಾದರೆ ಇನ್ನೂ ಅನುಕೂಲ.

ಸೌಖ್ಯ—ಒಂದಾನೊಂದು ಕಾಲದಲ್ಲಿ ನಾವು ಪಟ್ಟ ಪಾಡು.

ಸೌದೆ—ಹೆಸರು ವಿದ್ಯಾರಣ, ಅಡುಗೆಗೆ ಸೌದೆ ಇಲ್ಲ (ಗಾದೆ).

ಸೌಂದರ್ಯ—ಚರ್ಮ ಕರ್ಮ ಕುಶಲತೆ; ದೇಶಕಾಲಗಳನ್ನನುಸರಿಸಿ ಬದಲಾಗುವ ಗುಣ; ಸುಖದ ಹೊರಮೈ.

ಸ್ನಾನ—ಮಾಘಮಾಸದಲ್ಲಿ ಬಲವಂತದಿಂದಲೇ ಆಗಬೇಕಾದ ಸಂಸ್ಕಾರ.

ಸ್ನಾಯುವೇಗ—ವಾಯುವೇಗಕ್ಕಿಂತ ಹೆಚ್ಚು.

ಸ್ಪಷ್ಟೈಶ್ವರ್ಯ—ಹಣವಂತರ ಡಬ್ಬು ಜೀವನ.

ಸ್ವಗತ—ನಾಟಕದಲ್ಲಿ ಒಬ್ಬರನ್ನುಳಿದು ಮಿಕ್ಕವರೆಲ್ಲರಿಗೂ ಕೇಳಿಸುವಂತೆ ಕೂಗಬೇಕಾದ ಮಾತು.

ಸ್ವರ್ಗ—ಹೊಲಗೇರಿ ಇಲ್ಲದ ಸ್ಥಳ; ಸಾಲದ ಚಿಂತೆ ಇಲ್ಲದ ಜಾಗ. ಏಕೆಂದರೆ ನಮಗೆ ಸಾಲ ಕೊಟ್ಟವರಾರೂ ಅಲ್ಲಿಗೆ ಬರುವಂತೆಯೇ ಇಲ್ಲವೆಂಬ ಧೈರ್ಯ ನಮಗಿದೆ; ಯಾರನ್ನು ನೋಡಿಯೂ ಅಲ್ಲಿ ಕಣ್ಣು ಮಿಟುಕಿಸುವಂತಿಲ್ಲ; ಖಂಡಿಸದೆ ಕರಣವನು, ದಂಡಿಸದೆ ದೇಹವನು, ಉಂಡುಂಡು ಸ್ವರ್ಗವಯ್ದುಲ್ಕೆ............ಬೇರೊಂದೆಡೆಗೆ ಪೋಗುವುದೇಕೆ, ಇಲ್ಲೇ ಸ್ವರ್ಗ, ಅದೇ ಸ್ವರ್ಗ.

ಸ್ವರ್ಗವಾಸಿ—ಎಂದು ನಾವು ಇಲ್ಲಿ ಹೇಳುವ ಅನೇಕರು ಇನ್ನೂ ಅಲ್ಲಿಗೆ ತಲುಪೇ ಇಲ್ಲವಂತೆ.

ಸ್ವತಂತ್ರವಿಚಾರ—ಮದುವೆಯಾಗದವನ ಯೋಚನೆಗಳು.

ಸ್ವತಃಸಿದ್ಧ—ನಾವು ಮಾಡಿಕೊಂಡಿರುವ ಸಿದ್ಧಾಂತ.

ಸ್ವಪ್ನ—ನಮ್ಮ ಆಸೆಗಳೆಲ್ಲ ಕೈಗೂಡುವುದು ಇದರಿಂದಲೇ.

ಸ್ವಯಂಕೃತ—ತನ್ನ ಏಳಿಗೆಯನ್ನು ತಾನೇ ಸಾಧಿಸಿಕೊಂಡವನು; ಆದ್ದರಿಂದ ನಾವು ಉಳಿದ ಯಾರನ್ನೂ ಟೀಕಿಸುವಂತಿಲ್ಲ.

ಸ್ವಯಂಜೂ—ಅನೇಕ ಪ್ರಾಣಿಗಳನ್ನು ಹೋಲುವ ಒಬ್ಬ ಮನುಷ್ಯ ವ್ಯಕ್ತಿ.

ಸ್ವಯಂಭೂ—ಮಾನವನ ಸಹಾಯವಿಲ್ಲದೆ ಮುಂದಕ್ಕೆ ಬಂದವ.

ಸ್ವಯಂವರ— ಸ್ವಯಂ ವರನಿಲ್ಲದೆ ಯಾವ ಮದುವೆಯೂ ನಡೆಯುವಂತಿಲ್ಲ.

ಸ್ವಲ್ಪಮನುಷ್ಯ—ಕುಳ್ಳ.

ಸ್ವಹಸ್ತ—ನಮ್ಮ ಅವನತಿಗೆ ಇದೇ ಕಾರಣವೆಂದು ನಾವು ತಿಳಿಯದಿರುವುದೇ ಆಶ್ಚರ್ಯ.

ಸ್ವಾರ್ಥಪರ—ನಮ್ಮ ತಾಪತ್ರಯಗಳನ್ನು ಪರಿಹರಿಸುವ ಆಕಾಂಕ್ಷೆ ಇಲ್ಲದವ.

ಸ್ವಾರ್ಥಿ—ಉಳಿದವರ ಸ್ವಾರ್ಥಕ್ಕೆ ಗಮನಕೊಡದವ.

ಸ್ವಾದೋದಕ—ತರತರದ ರುಚಿಯುಳ್ಳ ಪಾನೀಯ.

ಸ್ವಾಭಿಮಾನಿ—ನೆರೆಯವರ ವಿಷಯವನ್ನೇ ಗಮನಿಸದವನು.

ಸ್ವಾವಲಂಬಿ—ದೇವರ ಮೇಲೆ ಭಾರ ಹಾಕದ ಭಕ್ತ.

ಸ್ವಾಹಾಪ್ರಿಯ–ಸಿಕ್ಕಿದ್ದನ್ನೆಲ್ಲ ಕಬಳಿಸಲು ಕಾತುರತೆಯಿಂದ ಬಾಯಿ ಬಿಡುವವ.

ಸ್ಥಿರಂಜೀವಿ—ಪೆರ್ಮನೆಂಟ್ ನೌಕರಿ ದೊರೆತಿರುವವ.

ಸ್ವಿಚ್ಚ್—ಇಲೆಕ್ಟ್ರಿಕ್ ದೀಪದ ರಹಸ್ಯವನ್ನರಿಯದವ, 'ಕರುಣಾಳು ಬಾ ಬೆಳಕೆ,' ಎಂದು ಕೈಮುಗಿದು ಬೇಡಿದಾಗ, 'ಹುಚ್ಚ, ಹಾಕು, ಸ್ವಿಚ್ಚ'–ಎಂಬ ಅಶರೀರಿ ಕೇಳಿಸಿತಂತೆ.

ಸ್ವಿಚ್ಚಾನುಸಾರ—ರೇಡಿಯೋದಲ್ಲಿ ಪ್ರೋಗ್ರಾಮುಗಳು ನಮ್ಮ ಇಚ್ಚಾನುಸಾರ ಅಲ್ಲ, ಬಹುಮಟ್ಟಿಗೆ ಸ್ವಿಚ್ಚಾನುಸಾರ.

ಸ್ತ್ರೀ—ಮನುಷ್ಯ, ಅನೇಕ ಶತಮಾನಗಳಿಂದಲೂ, ಪಳಗಿಸಲು ಪ್ರಯತ್ನಿಸಿ ವಿಫಲನಾಗಿರುವ ಪ್ರಾಣಿ; ಅನೇಕರು ಮಕ್ಕಳಿಗಾಗಿಯೇ ಇದನ್ನು ಸಾಕುತ್ತಾರೆ.

ಸ್ತ್ರೀನಿವಾಸ—ಲೋಲ.

ಸ್ತ್ರೀಮಂತ—ಪುರಾಣಗಳಲ್ಲಿ ಬರುವ ಬಹುಪತ್ನೀ ಸಮೇತರಾದ ರಾಜ ಮಹಾರಾಜರುಗಳು.

ಸ್ಥೂಲಂಕಷ–ಮುಖ್ಯವಾದ ಕೆಲವಂಶಗಳನ್ನು ಸ್ಥೂಲವಾಗಿ ನಿರ್ದೇಶಿಸುವುದು.

ಸ್ನೇಹ—ಶತ್ರುಗಳನ್ನು ಸ್ನೇಹಿಸಬೇಕೆಂದು ಅವರ ಮಿತ್ರರು ನಮಗೆ ಸಲಹೆ ಕೊಡುವರು.

ಸ್ನೇಹಿತರು—ನಮ್ಮನ್ನು ಕಟುವಾಗಿ ಟೀಕಿಸಬಲ್ಲ, ಆದರೂ ಟೀಕಿಸದೆ ನಮ್ಮನ್ನು ಮೆಚ್ಚುವ, ಜನ: ಇವರ ಅವಶ್ಯಕತೆ ಹೆಚ್ಚಿದಷ್ಟೂ, ಇವರ ಸಂಖ್ಯೆಯೂ ಕಡಿಮೆಯಾಗುತ್ತದೆ.

ಸ್ತೋತ್ರ—ಇದಕ್ಕೆ ತಲೆಬಾಗದವರು ಕಿವುಡರು; ಸ್ವಕಾರ್ಯ ಸಾಧನೆಗಾಗಿ ನಾವು ಹೇಳುವ ಸುಳ್ಳಿನ ಕಂತೆ.

ಸ್ತೋತ್ರೇಂದ್ರಿಯ—ಕಿವಿ.

ಸ್ಲೋಗನ್—ಬರೀ ಬಾಯಿ ಆಡಿಸೋರಿಗೆ, ಸ್ಲೋಗನ್ ಸಿಕ್ಕಿದ ಹಾಗೆ(ಗಾದೆ);

ಕೂಗನ್ ಎಂಬುದನ್ನು ನೋಡಿ.

ಸ್ವೋದರಪೂರಕ—ಭಾಗ್ಯವಂತ, ಜಾಣ.

## ಹ

ಹಕ್ಕಿ—ನಮ್ಮಂತೆಯೇ ಆಹಾರಾರ್ಜನೆಗಾಗಿ ಹಾರಾಡುವ ಪ್ರಾಣಿ.

ಹಕ್ಕು—ಹಕ್ಕಿಗಾಗಿ ಹೊಡೆದಾಡಬಾರದು; ಅದನ್ನು ಚಲಾಯಿಸುವ ಶಕ್ತಿಯನ್ನು ಪಡೆದರೆ, ತಾನೇ ಸಿಗುವುದು ಹಕ್ಕು.

ಹಗಲುದೀವಟಿಗೆ—ದೊಡ್ಡವರನ್ನು ಮೆರಸುವಾಗ ನಾವು ಅವರಿಗೆ ಮಾಡುವ ಅಪಮಾನ.

ಹಗುರ—ಬೇಡುವವನ ಇರವು.

ಹಗೆ—ಹಗೆ ಇಲ್ಲವೆಂದು ಆಯುಧ ಮರೆಯಬಾರದು (ಗಾದೆ) ಅಂದ ಮೇಲೆ, ಹಗೆಯವರಿರುವಾಗ ?

ಹಗ್ಗ—ಬಹಳ ಅಗ್ಗವಾದ ಉಪಾಯ.

ಹಟವಾದಿ—ಇಂಗ್ಲೀಷ್ ಓದಿದರೂ ಜುಟ್ಟನ್ನುಳಿಸಿಕೊಂಡಿರುವವ; ಹಣವಿದ್ದರೂ, ಬೀಡಿ ಸೇದುವವ; ಮದ್ಯಪಾನ ಮಾಡದ ಕ್ಲಬ್ಬಿಗ.

ಹಡಪ—ಈಗ ಎಲ್ಲರ ಕೊಂಕುಳಲ್ಲೂ ಇದೇ.

ಹಣ—ಮಾವನನ್ನು ಹೆದರಿಸಿದರೆ, ಉದುರುವ ಪದಾರ್ಥ; ಇದರ ಬೆಲೆ ಎಷ್ಟೆಂದು ತಿಳಿಯಬೇಕಾದರೆ, ಯಾರನ್ನಾದರೂ ಸಾಲ ಕೇಳಿ; ನಮ್ಮ ಮೇಲೆ ಪ್ರೀತಿ ಇರುವವರಿಗೆ ಇದಿಲ್ಲದಿರುವುದು ನಮ್ಮ ದೌರ್ಭಾಗ್ಯ.

ಹಣವಂತ—ಹಣವಂತರೆನಿಸಲು ಪ್ರಯತ್ನಿಸಿದರೆ, ಬಡತನ ಕಟ್ಟಿಟ್ಟಿದ್ದು.

ಹಣಹದ್ದು—ಕಂಡ ಕಂಡ ಕಿಸೆಗಳನ್ನೆಲ್ಲ ದೋಚುವ ಪ್ರಾಣಿ (ಪ. ವಾಣಿ).

ಹಣಹೀನ—'ಹಣವಾನ್ ಗುಣವಾನ್ ಲೋಕೇ ಹಣಹೀನೋ ಹೆಣಾಧಮಃ.'

ಹಣಾನುಬಂಧ—ಲಂಚಕ್ಕೆ ಕಟ್ಟುಬಿದ್ದವ.

ಹಣಾಹಣಿ—ಹಣಕ್ಕಾಗಿ ಜಗಳ; ಹಣ ಎಂದು ಬರೆದಿರುವ ಹಣೆ.

ಹಣಾಹುತ—ಹಣವಿಲ್ಲದ್ದರಿಂದಾದ ಅನಾಹುತ; ಸುಮಾರು ಎಲ್ಲ ಅನಾಹುತಗಳೂ ಹಣಾಹುತಗಳೇ.

ಹಣ್ಣೆಲೆ—ಹಣ್ಣೆಲೆ ಉದುರುವಾಗ, ಚಿಗುರೆಲೆ ಗೊಳ್ ಎಂದು ನಗುತ್ತದೆ;

ಆದರೆ........ಪಾಪ !

ಹಣ್ಣೊಪ್ಪಿಸುವ ಹಾಡು—ಮೇಲಧಿಕಾರಿಯ ಸ್ತೋತ್ರ.

ಹತ್ಯಾಗ್ರಹ—ಬಗ್ಗಿದವನ ಮೇಲೆ ಹತ್ತಿ ಕುಳಿತುಕೊಳ್ಳಬೇಕೆಂಬ ದುರಾಸೆ.

ಹತ್ತಿರ—ಹತ್ತಿರ, ಎಂದರೆ ಎಷ್ಟು ಮೈಲಿ ದೂರ, ಎಂಬುದು ಇನ್ನೂ ನಿರ್ಧರವಾಗಿಲ್ಲ.

ಹತ್ತು—ಹತ್ತು ಜನರ ಮಧ್ಯೆ ಎದ್ದ ಜಗಳ ಹತ್ತಿಕ್ಕದೆ ತೀರದು; ಹತ್ತು ಹೆತ್ತರೂ ಕೊಂಚ ಸ್ವತ್ತು ಇರಬೇಕು.

ಹಂದಿ—ಮುನಿಸಿಪಲ್ ಸ್ವಯಂಸೇವಕದಳ- ದೊಡ್ಡ ದೊಡ್ಡ ನಗರಗಳಲ್ಲಿ, ಇವರನ್ನು ಪಾಲಿಸಿ ಪೋಷಿಸುತ್ತಿರುವುದನ್ನು ನೋಡಬಹುದು.

ಹನುಗ್ರಹ—ದೇವರ ಅನುಗ್ರಹವಿದ್ದರೆ, ನಮ್ಮ ಪತ್ನಿಯರಿಗೆ ಇದು ಲಭಿಸುತ್ತದೆ; ಬಾಯಿಗೆ ಬೀಗ.

ಹನುಮಾನ—ಸೀತೆಯೋ, ಮಂಡೋದರಿಯೋ, ಎಂಬ ಕಪಿ ಸಂದೇಹ.

ಹಬ್ಬ—ಅಜೀರ್ಣ ನಾಟಕದ ಪೀಠಿಕಾಪ್ರಕರಣ.

ಹಮ್ಮಲೆ—ಹಮ್ಮಿಂದ ನಾವು ನಮ್ಮ ವಿಷಯ ಹೇಳಿಕೊಂಡು, ಎದೆ ತಟ್ಟಿಕೊಳ್ಳುವುದು.

ಹಮ್ಮು—ಕಾರಣವಿಲ್ಲದೆಯೇ, ಇದು ಅತೀ ಎತ್ತರ ಬೆಳೆಯಬಲ್ಲುದು.

ಹಮ್ಮೇಳನ—ಚುನಾವಣೆಯಲ್ಲಿ ಜಯಗಳಿಸಿದ ಪಕ್ಷದವರ ಸಭೆ.

ಹಯಗ್ರೀವ—ಕೆಲವರು ಇದನ್ನೂ ತಿನ್ನುತ್ತಾರೆ.

ಹಯಮಾರಕ—ಜಟಕಾ ಹೊಡೆಯುವವ.

ಹಯವದನ—ಕುದುರೆ.

ಹರಿಯಪ್ಪ—ಈತನ ಕಚೇರಿಯಲ್ಲಿ ಮಾತ್ರ ಕಾಗದಪತ್ರಗಳೆಲ್ಲ ಬಂದ ದಿನವೇ ಫೈಸಲ್.

ಹರಿಶ್ಚಂದ್ರ—ಸುಳ್ಳು ಹೇಳಿ ನಿಭಾಯಿಸಲು ಜಾಣತನ ಸಾಲದೆ ಸುಡುಗಾಡಿಗೆ ಹೋಗಿ ಪೇಚಾಡಿದವ....ಕಡೆಗೆ, ದೇವರೇ ಬಂದು ಕಾಪಾಡಬೇಕಾಯಿತು, ಇವನನ್ನ.

ಹರಿತಾಳ—ವಿದ್ಯಾರ್ಥಿಗಳ ಇಚ್ಛೆಯಂತೆ, ಶಾಲೆ ನಡೆಸುವ ದಿನ.

ಹರಿಹರ—ಒಬ್ಬ ಕನ್ನಡ ಕವಿ, ತುಂಬಾ ರಗಳೆ ಮಾಡಿದವನು.

ಹಲಾಯುಧ—ಚುನಾವಣೆ ಕಾಲದಲ್ಲಿ ನೇಗಿಲನ್ನೇ ಗುರುತಾಗಿಟ್ಟುಕೊಂಡು, ವೋಟುಗಳು ಪಡೆಯಲು ಪ್ರಯತ್ನ.

ಹಲ್ಲಿ—ಉಬ್ಬು ಹಲ್ಲಿನವಳು.

ಹಲ್ಲೀಶ—ಉಡ.

ಹಲ್ಲು—ಎದ್ದು, ಬಿದ್ದು, ಮತ್ತೆ, ಎದ್ದು ಬೀಳುವ ನಮ್ಮ ಗೆಳೆಯರು; ಇದು ತುಟಿ ಮೀರದಿದ್ದರೆ, ಚೆನ್ನ; ಇದನ್ನು ಹಿಡಿದು ಮಾತಾಡುವವರು ಬಹಳ ಕಡಮೆ; ನಮ್ಮನ್ನು ಹೂಳಲು ನಾವೇ ಗುಳಿ ತೋಡುತ್ತೇವಂತೆ, ನಮ್ಮ ಹಲ್ಲುಗಳಿಂದ. ಹಲ್ಲುಕೊಟ್ಟ ದೇವರು ಹುಲ್ಲೂ ಕೊಡುತ್ತಿದಾನೆ, ಕಡಲೆ ಕೊಡಲೊಲ್ಲ.

ಹಲ್ಲುಪುಡಿ—ಹಲ್ಲನ್ನೇ ಪುಡಿಮಾಡಿ ಮಾರುವವರು ಬಹಳ ಕಡಮೆ, ಜಗತ್ತಿನಲ್ಲಿ.

ಹಲ್ಲೋಪತಿ—ಹಲ್ಲೋ ಎಂದು ಪ್ರೀತಿಯಿಂದ ಸಂಬೋಧಿಸಿ, ಚಿಕಿತ್ಸೆ ಮಾಡುವ ವಿಧಾನ; ಅಂಥ ವೈದ್ಯರು ಬಹಳ ಅಪರೂಪ.

ಹಲ್ಲೋಲ—ಸುಂದರವಾದ ದಂತ ಪಂಕ್ತಿಯಿರುವ ಹೆಮ್ಮೆ.

ಹವ್ಯಾಸ—ವ್ಯಾಸನ ಹವ್ಯಾಸ–ಮಹಾಭಾರತ ರಚನೆ.

ಹವೆ– ಇದನ್ನು ಶ್ರೀಮಂತರು ಬಹಳ ಪ್ರಯಾಸಪಟ್ಟು ಕುಡಿಯುವರು.

ಹಸ್ತಗುಣ—ಕಿಸೆ ಹರುಕರ ಚಾಕುಚಕ್ಯತೆ.

ಹಸ್ತಚಾಪಲ್ಯ—ಲಂಚ ಬೇಕೆಂಬಾಸೆ.

ಹಸ್ತಮನ—ಕೊಡುಗೈ ಬರಿದಾದಾಗ.

ಹಸ್ತಲಾಘವ—ಅರವತ್ತುನಾಲ್ಕು ಕಲೆಗಳಲ್ಲಿದೂ ಒಂದು.

ಹಸ್ತವ್ಯಸ್ತ—ಲಂಚ ತೆಗೆದುಕೊಂಡದ್ದು ಪತ್ತೆಯಾದಾಗ.

ಹಸ್ತ್ಯಾರೋಹಣ—ಇದರ ಯೋಗ ಇರುವವರು ಗುಡಿ ಮುಂದಿನ ಕಲ್ಲಾನೆಯ ಮೇಲೆ ಕೂರಬಾರದು; ಮಾವುತನ ಕೆಲಸಕ್ಕೂ ಒಪ್ಪಿಕೊಳ್ಳಬಾರದು.

ಹಸಿದವರು-ಉಂಡವರ ಉಬ್ಬಸ ಹೇಗಿರುತ್ತೆ ಎಂಬ ಅರಿವು ಇವರಿಗಿರುವುದಿಲ್ಲ.

ಹಸಿವು—ಭೋಜನಕೂಟದಲ್ಲಿ ಹಸಿವಿಲ್ಲದವರಿಗೆ ಊಟಹಾಕುವುದೇ ಹೆಚ್ಚು.

ಹಸು—'ನ ಸಾಧು ಸರ್ವಂ' ಈ ಪ್ರಾಣಿ ಹಾಲು ಕೊಡುವುದಿಲ್ಲ. ನಾವೇ ಹಿಂಡಬೇಕಾಗುತ್ತದೆ; ಹಾರ್ಮೋನಿಯಮಿಗಿಂತ ಹಸುವೇ ವಾಸಿ; ಎರಡೂ ಒಂದೇ ತೆರನಾಗಿ ಕೂಗುವುದು; ಆದರೂ, ಹಸುವಿನಿಂದ ಇತರ

ಪ್ರಯೋಜನಗಳೂ ಉಂಟು.
ಹಸುರುಮನೆ—ಹೆಸರು ಕೆಡಿಸಿಕೊಳ್ಳುವ ಜಾಗ.
ಹಂಸ—ಹಾಲನ್ನು ಕುಡಿದು ನೀರನ್ನು ಬಿಡುವ ಶಕ್ತಿಯುಳ್ಳ ಪಕ್ಷಿವಿಶೇಷ.
ಹಾಡಾಡಿಗ—ಹಾಡು ಹೇಳಿಕೊಂಡು ತಿರುಗಾಡಿ ಹೊಟ್ಟೆ ಹೊರೆದುಕೊಳ್ಳುವವ.
ಹಾಡು—ಮಾತಿನಲ್ಲಿ ಹೇಳಲು ಅಸಹ್ಯ ಎನಿಸುವ ವಿಷಯಗಳನ್ನು, ಸಿನಿಮಾಗಳಲ್ಲಿ ಹಾಡೇ ಬಿಡುತ್ತಾರೆ; ಒಳಗಿನ ಸಂಕಟವನ್ನು ಹೊರಪಡಿಸುವ ವಿಧಾನ.
ಹಾದರ—ವಾರ್ ಚೀಟಿಗಳನ್ನು ನೋಡಿ; ಹಂಡಿಸಲ್ಲಿ ಕಟ್ಟಿದ್ದು ಹಾದರವಲ್ಲ (ಗಾದೆ).
ಹಾರ್ಮೋನಿಯಂ—ಒಂದು ಭಯಂಕರ ವಾದ್ಯ; ಆದರೆ ಬಾಯಿ ಹಾರ್ಮೋನಿಯಂ ಎರಡೂ ಸೇರಿದರೆ ಇದಕ್ಕಿಂತ ಭಯಂಕರ.
ಹಾರನ್—ಹಾ ! ರನ್ ! ಎಂದು ಕೂಗಿ ಹೇಳುವ ಒಂದು ಉಪಕರಣ.
ಹಾರವ—ಹಾ, ಎಂದು ಸದ್ದು ಹೊರಡಿಸುವವ.
ಹಾರೋಪಣ—ವಿಮಾನದ ಟಿಕೀಟ್ ದರ.
ಹಾರೋಪ್ಲೇನ್—ಏರೋಪ್ಲೇನ್ ಹಾರುವಾಗ; ಇಳಿಯೋಪ್ಲೇನ್, ಎಂಬುದನ್ನು ನೋಡಿ.
ಹಾಲಾಹಲ—ಕೊಳೆ-ಕಶ್ಮಲ ತುಂಬಿ ಅನಾರೋಗ್ಯಕಾರಿಯಾಗಿರುವ ಸಿನಿಮಾ ಮಂದಿರ.
ಹಾಲುಸೀಸೆ--ಇದರ ಮೂಲಕ ಹಾಲು ಕುಡಿಯಲು ಕಲಿತ ಮಕ್ಕಳು ಮುಂದಕ್ಕೂ ಸೀಸೆಗಳಲ್ಲಿರುವ ಪಾನೀಯಗಳನ್ನೇ ಬಯಸುತ್ತವಂತೆ.
ಹಾಲು—ನೀರಿಗೆ ನಾಗರಿಕರು ಕೊಡುವ ಹೆಸರು; ಹಾಲನ್ನು ಸಸ್ಯಾಹಾರಿಗಳೂ ತೆಗೆದುಕೊಳ್ಳಬಹುದೆಂದು ಧರ್ಮಶಾಸ್ತ್ರಗಳು ಹೇಳುತ್ತವೆ.
ಹಾಲುಮತದವರು—ಕಾಫಿ, ಟೀ ಇತ್ಯಾದಿ ಪಾನೀಯಗಳನ್ನು ವರ್ಜಿಸಿ, ಹಾಲನ್ನೇ ಕುಡಿಯುವ ಜನ.
ಹಾವಾಡಿಗ—ಪುಂಗಿ ಬಾರಿಸಿ, ಎಂಥ ಮೇಲಧಿಕಾರಿಯನ್ನೂ ಒಲಿಸಬಲ್ಲ ನೌಕರ.
ಹಾವು—ಕಂಡವರು ಕಟ್ಟಿ ಮುಗಿಸಿದ ಹುತ್ತವನ್ನು ಆಕ್ರಮಿಸಿ ಅಲ್ಲಿ ವಾಸ ಮಾಡುವ ಜನ; ಹಾವು ಸಾಯಬಾರದು, ಕೋಲು ಮುರಿಯಬಾರದು-

ಆಗ ಹೊಡೆಯುವುದಕ್ಕೂ ಆನಂದ.

ಹಾರ್ಷೇಯ— ಹಳೆಯ ಮತ್ತು ಕಠೋರವಾದ ಆಚಾರ.

ಹಾಸ್ಪತ್ರೆ—ಹಾಸಿಗೆಗಳನ್ನು ಹಾಸಿರುವ ಆಸ್ಪತ್ರೆ; ಇನ್-ಪೇಷಂಟ್ ವಾರ್ಡ್.

ಹಾಸ್ಯ—ಎದೆಯೊಳಗಣ ಹುಣ್ಣಿಗೆ ಅತ್ಯುತ್ತಮವಾದ ಮುಲಾಮು; ಇತರರಿಗಾಗುವ ಅನಾಹುತಗಳು ನಮ್ಮಲ್ಲಿ ಹಾಸ್ಯವನ್ನು ಪ್ರಚೋದನೆಮಾಡುತ್ತವೆ.

ಹಾಸ್ಯಾರ್ಣವ—ಜಗದೀಶ್ವರನ ಕೃತಿ.

ಹಾಸಿಗೆ—ಶಕ್ತಿ ಕುಂದಿದಾಗ, ನಾವು ಹಿಡಿಯುವ ವಸ್ತು; ಬಹುಮಂದಿ ಜನ ಸತ್ತಿರುವ ಸ್ಥಳ.

ಹಾಹಾಹೂಹೂ—ಬಿಸಿಲುಗಾಲದಲ್ಲಿ ನರಳುವ, ಹಾಗೂ ಚಳಿಗಾಲದಲ್ಲಿ ಒದ್ದಾಡುವ ಒಬ್ಬ ಗಂಧರ್ವ.

ಹಿಗ್ಗರಣೆ—ಹಿಗ್ಗಿನಿಂದ ಹಾಕಿದ ಒಗ್ಗರಣೆ.

ಹಿಂಗಿತಜ್ಞ—ಆಸೆ ಮುರಿದು ಬಿದ್ದದ್ದನ್ನು ತಿಳಿದವ.

ಹಿಂಗು—ಇದೊಂದಿದ್ದರೆ,ಸಾರುಮಾಡುವುದು ಸುಲಭವಂತೆ,ತಮಿಳು ದೇಶದಲ್ಲಿ.

ಹಿಟ್ಟು—ಹೊಟ್ಟೆಗೆ ಹಿಟ್ಟಿದ್ದಾಗ, ಜುಟ್ಟಿಗೆ ಮಲ್ಲಿಗೆ ಹೂವು ಮುಡಿದರೆ, ಎಷ್ಟೋ ಆಪ್ಯಾಯಮಾನವಾಗಿರುತ್ತದೆ; ಅರ್ಧ ಹಸಿವು ಮರೆತು ಹೋಗುತ್ತದೆ; ಹಿಟ್ಟಕ್ಕಿದವನ ತಲೆ ನುಣ್ಣಗೆ (ಗಾದೆ).

ಹಿತ್ತಾಳೆ—ಪ್ರೈಯೆಲ್ಲ ಪುತ್ಥಳಿ ಚಿನ್ನ; ಕಿವಿ ಮಾತ್ರ ಹಿತ್ತಾಳೆ, ಚಾಡಿ ಕೇಳುವ ಜನಕ್ಕೆ.

ಹಿಂದಾಕ್ರಾಂತ—ಹಿಂದಿನದನ್ನು ನೆನೆದು ಅಳುವುದು; ಪಶ್ಚಾತ್ತಾಪ.

ಹಿಂದು ಭಿ....ಮುಂದು ಭಿ, ದುಂದು ಭಿ—ಎಂಬುವನ್ನು ನೋಡಿ.

ಹಿಂದೆ—ಯಾರನ್ನೂ ಹಿಂದೆ ಹೊಗಳಬಾರದು, (ಅವರ ಕಿವಿಗೆ ಅದು ಮುಟ್ಟದಿರಬಹುದು) ಮುಂದೆ ಬೈಯಬಾರದು (ಅವರ ಕಿವಿಗೆ ಮುಟ್ಟಬಹುದು); ಹಿಂದೆ ಹೋದರೆ ಎಳೆ; ಮುಂದೆ ಬಂದರೆ ತಳ್ಳು (ಗಾದೆ).

ಹಿನ್ನುಡಿ— ಚಾಡಿ.

ಹಿಮ್ಮೇಳನ—ಅನುಯಾಯಿಗಳ ಸಭೆ; ಅಭಿನಂದನಾ ಸಭೆ.

ಹಿರಣ್ಯಗರ್ಭ—ಆಗರ್ಭ ಶ್ರೀಮಂತ.

ಹಿರಣ್ಯಗರ್ವ—ಆಸ್ತಿವಂತರ ಜಂಬ.

ಹಿರಣ್ಯಾಕ್ಷ--ಕಕ್ಷಿಗಾರನ ಕಿಸೆಯಲ್ಲಿರುವ ಗಂಟಿನ ಮೇಲೆಯೇ ದೃಷ್ಟಿ ಇರುವ ಲಾಯರು.

ಹಿರಿಯಕ್ಕ—ಈಕೆಯ ಚಾಳೀಸು ಮನೆಗೆಲ್ಲ ಬರುತ್ತದಂತೆ, ಇಂದಲ್ಲ, ನಾಳೆ.

ಹಿರಿಯಣ್ಣ--ಸಿರಿಯಣ್ಣ ಉಳ್ಳನಕ, ಹಿರಿಯಣ್ಣನೆನಿಸಿಪ್ಪ.

ಹಿಂಸಕ್ಷೀರನ್ಯಾಯ—ಹಿಂಸೆ ಕೊಟ್ಟಾದರೂ ಹಾಲು ಕುಡಿಸಲೇಬೇಕು, ಮಕ್ಕಳಿಗೆ ಎಂಬ ನ್ಯಾಯ.

ಹಿಂಸತೂಲಿಕಾತಲ್ಪ—ಚುಚ್ಚುವ ಹಾಸಿಗೆ.

ಹಿಂಸಧ್ವನಿ—ಹಾರ್ಮೋನಿಯಂ ಧ್ವನಿ.

ಹೀನಸುಳಿ—ಯಾವಕ್ಷೌರಕನಿಂದಲೂ ಇದನ್ನು ತೆಗೆಯಲಾಗುವುದಿಲ್ಲವಂತೆ.

ಹೀನಾಕ್ಷಿ—ಕೆಳಮಟ್ಟದಲ್ಲೇ ಕಣ್ಣು ಹಾಯಿಸುವವಳು.

ಹೀರೋ—ಹೀರಿ ಜೀವಿಸುವವ.

ಹುತ್ತೇಜನ—ತಾಪಸಿಗಳು.

ಹುಚ್ಚ—ಹತ್ತೂ ಜನರ ದಾರಿಯನ್ನು ಹಿಡಿಯದವ; ಇವನಿಂದಲೇ ಜಗತ್ತಿನಲ್ಲಿ ಪ್ರಗತಿ; ಬುದ್ಧಿವಂತರು ವಾಸಿಮಾಡಲೆಳಸುವ ಸ್ವತಂತ್ರ ಜೀವಿ.

ಹುಚ್ಚಾಟನೆ—ಹುಚ್ಚ ಎಂದು ಆಸ್ಪತ್ರೆಗೆ ಕಳುಹಿಸುವಿಕೆ.

ಹುಚ್ಚಾತುರ್ಯ—ವಿಪರೀತ ಸಾಮರ್ಥ್ಯ.

ಹುಚ್ಚಾರಣೆ—ಯದ್ವಾತದ್ವಾ ಉಚ್ಚಾರಣೆ.

ಹುಚ್ಚಾಸ್ಪತ್ರೆ—ಇಲ್ಲಿನಸ್ಥಳ ಸಂಕೋಚದಿಂದ ಅನೇಕರು ಇದರ ಹೊರಗಡೆಯೇ ತಿರುಗಾಡಬೇಕಾಗಿದೆ.

ಹುಚ್ಚುಹೊಲೆಯ—ಹುಸಿಮಾತು ಬೊಗಳುವವ.

ಹುಚ್ಚಾಟನೆ—ವಿಪರೀತ ಕೋಪದಿಂದ ಒಬ್ಬರನ್ನು ಹೊರದೂಡುವುದು.

ಹುಚ್ಚು—ರಾಷ್ಟ್ರಗಳಿಗೂ ಕೋಮುಗಳಿಗೂ ಈ ಖಾಯಿಲೆ ಆಗಾಗ ಬರುವುದುಂಟು.

ಹುಟ್ಟು—ಹುಟ್ಟುತ್ತ ಅಣ್ಣತಮ್ಮಂದಿರು, ಬೆಳೆಯುತ್ತ ಕರ್ಣಾರ್ಜುನರು; ಹುಟ್ಟಿಸಿದ ದೇವರ ಮುಂದೆ ಕುಟ್ಟಿಕೊಂಡು ಅತ್ತರೆ ಫಲವೇನು ?

ಹುಣ್ಣುಡಿ— ಕಿವಿಗೆ ಕೀವುಕೊಡುವಂಥ ಮಾತು.

ಹುಣಿಸೆ—ಬಡವರು ತಿನ್ನುವ ಏಕೈಕ ಹಣ್ಣು; ಹುಣಿಸೆ ಮುಪ್ಪಾದರೂ ಹುಳಿ

ಕಡಮೆಯಾಗುವುದಿಲ್ಲ.

ಹುತ್ತ—ಇದನ್ನು ಬಡಿದರೆ ಹಾವು ಸಾಯುವುದೆಂದು ಅನೇಕ ತಾಪಸಿಗಳು ನಂಬಿರುವರು.

ಹುಲಿ—ಮನುಷ್ಯ ಹುಲಿಯನ್ನು ಕೊಂದರೆ, ಶೌರ್ಯ; ಹುಲಿ ಮನುಷ್ಯನನ್ನು ಕೊಂದರೆ, ಕ್ರೌರ್ಯ; ಮಾರ್ಜಾಲ ಗೋತ್ರದ ಮಹಾಪುರುಷ.

ಹುಲಿಚರ್ಮ—ಹುಲಿಗಳೆಲ್ಲವೂ ಇದನ್ನು ಹೊದ್ದೇ ತಿರುಗುವುವು.

ಹುಲಿ ಹಾಲು—ಇದನ್ನು ಹಲವರು ಕನ್ನಡಿಗರು ಮೆದ್ದರಂತೆ.

ಹುಲ್ಲು—ಹುಟ್ಟಿಸಿದ ತಂದೆ, ಬಹಳ ಹೆಚ್ಚಾದರೆ, ಇದನ್ನೂ ತಿನ್ನಿಸಬಹುದು.

ಹುಸಿ—ಹುಸಿ ಹೇಳಿದರೂ, ವೇದಿಕೆಯ ಮೇಲಿಂದ ಹೇಳಬೇಕು (ಗಾದೆ).

ಹುಸಿಹೂ—ನಿಷ್ಫಲವಾದ ಅಲಂಕಾರ.

ಹುಳಿ—ಇದನ್ನು ಹಿಂಡುವುದರಲ್ಲೇ ಹಲವರಿಗೆ ಜನ್ಮಸಾಫಲ್ಯ.

ಹುಂ—ಓಂಕಾರಕ್ಕಿಂತ ಹುಂಕಾರವೇ ಪ್ರಭಾವಶಾಲಿ (ಗಾದೆ).

ಹೂಣಾಲಂಕಾರ—ಸೂಟ್ ವಗೈರೆ.

ಹೂದೋಟ—ನೆರೆಮನೆಯವರ ಪೂಜಾಗೃಹಕ್ಕೆ ಪುಷ್ಪಗಳನ್ನು ನಾವೊದಗಿಸುವ ವಿಧಾನ.

ಹೂವು–ಕಾಯಿಬಿಡುವ ಮೊದಲೇ, ಇದನ್ನು ಕಿತ್ತರೆ, ದೇವರಿಗೆ ಪ್ರೀತಿಯಂತೆ.

ಹೂಂ—ಓಂಕಾರಕ್ಕಿಂತಮೊದಲೇ, ಇದನ್ನು ಉಚ್ಚರಿಸಲು ಮಾನವ ಕಲಿತಿದ್ದ.

ಹೃದಯ—ಮೆದುಳಿನ ಸಹಾಯವಿಲ್ಲದೆ ಕೆಲಸಮಾಡುವ ಅಂಗ.

ಹೆಗಲುಹೊತ್ತು—ಅಂತ್ಯಕಾಲ.

ಹೆಗ್ಗಣ—ಹೆತ್ತವರಿಗೆ ಮಗ ಹೆಗ್ಗಣವಾಗಿಯಾದರೂ ಬದುಕಲಿ, ಎಂಬುದೇ ಆಸೆ; ಹೆಗ್ಗಣದ ಸ್ವಭಾವವಿರುವ ತಂದೆಯು ಮಗನೂ ಹೆಗ್ಗಣವಾಗಿಯೇ ಬೆಳೆಯಬೇಕು ಎಂದು ಆಶಿಸುತ್ತಾನೆ.

ಹೆಂಗಳವಾದ್ಯ—ಹೆಂಗಸರು ಹಾಡುವ ಮಂಗಳ ಗಾನ.

ಹೆಂಚಿನಮನೆ—ಮಳೆಗಾಲದಲ್ಲಿ ಮಾತ್ರ ಸೋರುವ ಮನೆ.

ಹೆಜ್ಜೆ–ಹೆಜ್ಜೆ ತಪ್ಪಿದವರು ಅನೇಕರುನೃತ್ಯ ಮಾಡುತ್ತಿರುವುದು ಶೋಚನೀಯ.

ಹೆಡ್ಡ—ಹೇಳೋನು ಹೆಡ್ಡನಾದರೆ, ಕೇಳೋನು ಕಿವುಡನಾಗಿರುವುದೇ ಮೇಲು.

ಹೆಣ್ಣು—ಮನುಷ್ಯನ ತಾಯಿ, ಮಡದಿ, ಅಕ್ಕ, ತಂಗಿ, ಅತ್ತೆ, ಪ್ರಿಯೆ.

ಹೆಸರು—ಹೆಸರಲ್ಲೇನಿದೆ ಎಂದು ಭಾವಿಸಿ, ಅನೇಕರು ಅದನ್ನು ಕೆಡಿಸಿಕೊಳ್ಳುತ್ತಾರೆ.

ಹೆಂಡ—ತಾಪತ್ರಯಗಳನ್ನು ಕರಗಿಸುವ ಶಕ್ತಿ ಇದಕ್ಕಿದೆಯಂತೆ; ಜಗತ್ ಭ್ರಮಣಕ್ಕೆ ಇದೂ ಒಂದು ಕಾರಣ.

ಹೆಂಡತಿ—'ಹೆಂಡತಿ, ಪ್ರಾಣ ಹಿಂಡುತಿ,' ಎಂದು ದಾಸರು ಉದ್ಗಾರ ತೆಗೆದಿದಾರೆ; ಅಡವಿಡಲಾಗದ ಚಿನ್ನ.

ಹೆಂಡಂದಿರು—ಹೆಂಡ ಕುಡಿಯುವ ಗಂಡಂದಿರು.

ಹೆಪ್ಪು—ಇದರ ಲೆಕ್ಕ: ಖಂಡುಗ ಹಾಲಿಗೆ ಒಂದೇ ಬೊಟ್ಟು ಹೆಪ್ಪು.

ಹೆಬ್ಬೆಟ್ಟು—ಹೆಬ್ಬೆಟ್ಟೊತ್ತಿ ಒಬ್ಬಟ್ಟಿಗೆ ಸಾಲ ತರುವವರೂ ಇದಾರೆ; ಗುರು ವಿದ್ಯೆ ಹೇಳಿಕೊಟ್ಟರೂ, ಕೆಲವರು ಹೆಬ್ಬೆಟ್ಟಿನ ಅಭ್ಯಾಸ ಬಿಡುವುದಿಲ್ಲ; ಆದ್ದರಿಂದ, ಅದನ್ನು ಗುರುದಕ್ಷಿಣೆಯಾಗಿ ಕಿತ್ತುಕೊಳ್ಳುವುದೇ ಸರಿ ಎಂದು ದ್ರೋಣನಿಗೆನಿಸಿರಬೇಕು.

ಹೇಡಿತನ—ಬುದ್ಧಿಶಕ್ತಿ ಬೇಕಾದಷ್ಟಿದ್ದಿದ್ದರೆ, ಅನೇಕ ಶೂರರು ಹೇಡಿಗಳಾಗಿರುತ್ತಿದ್ದರು.

ಹೇಮಕೂಟ—ಶ್ರೀಮಂತರ ಟೀ ಪಾರ್ಟಿ.

ಹೇರಂಪ—ಕ್ರಾಪ್ ಬಾಚುವ ಗಲಾಟೆ.

ಹೇಷಾ—ಸಂಸ್ಕೃತ ಕುದುರೆಗಳು ಹೀಗೆ ಕೂಗುತ್ತಿದ್ದುವಂತೆ.

ಹೇಸರುಕತ್ತೆ—ಸಂತಾನಶೂನ್ಯ.

ಹೇಳಿಬರೆಯಿಸಿ—ಅನಕ್ಷರಸ್ಥರು ಅನುಸರಿಸುವ ನೀತಿ.

ಹೊಗಳುಭಟ್ಟ—ಬೆನ್ನಹಿಂದೆ ಹೇಳಲು ಧೈರ್ಯವಿಲ್ಲದ್ದನ್ನು, ಎದುರಿಗೆ ನಿಂತು ಹೇಳುವ ಹೇಡಿ.

ಹೊಗಳಿಕೆ—ಸ್ತೋತ್ರಮಾಡಿದರೆ, ಕೋಪಗೊಳ್ಳುತ್ತಾರೆ, ಎಂಬುದೇ ಎಲ್ಲ ಹೊಗಳಿಕೆಗಳ ಪೀಠಿಕೆಯೂ.

ಹೊಗೆ—ನಂಟರನ್ನೋಡಿಸುವ ಉಪಾಯ.

ಹೊಗೆಸೊಪ್ಪು—ಒಂದು ಬಗೆಯ ಹುಳ ಇದನ್ನು ತಿನ್ನುತ್ತದಂತೆ; ಸಿಗರೇಟುಗಳಲ್ಲಿ ಈ ಸೊಪ್ಪು ಇದೆ, ಎಂದು ಅನೇಕರು ನಂಬುತ್ತಾರೆ.

ಹೊಂಗರಿಗ—ಹೊನ್ನಿಗಾಗಿ ಸೇವೆ ಮಾಡುವ ಡಿಂಗರಿಗ.

ಹೊಂಗೆ—ಮುದಿ ಕುರುಡಿ ಹೊಂಗೆಯನು, ಬಾದಾಮಿ, ಕೊ, ಎನುತ ಪದು ಳದಿಂ ಮೊಮ್ಮಂಗೆ ಕೊಡಲು ಸಿಹಿಯಹುದೆ ?

ಹೊಟ್ಟೆಕಿಚ್ಚು—ಹೊಟ್ಟೆಯೊಂದರ ರಗಳೆ ಸಾಲದೆಂದೇನೋ ವಿಧಿ, ಹೊಟ್ಟೆ ಕಿಚ್ಚಿನ ಕಿಡಿಯ ನೆಟ್ಟಿಹನು ನರನೊಳ್ ? ಮರದೊಳಗಣ ಕಿಚ್ಚು ಮರವ ಸುಟ್ಟಂತೆ. (ಮ. ತಿಮ್ಮ)

ಹೊಟ್ಟೆನೋವು—ಅಡುಗೆಮಾಡುವವರ ಕೈಚಳಕದ ಫಲಿತಾಂಶ.

ಹೊತ್ತಾಯ—ಇಷ್ಟು ಹೊತ್ತಿನೊಳಗೆ ಮುಗಿಸಿಬಿಡಬೇಕೆಂಬ ಒತ್ತಾಯ.

ಹೊತ್ತು—ಕಡೆಗೆ ನಾವೆಲ್ಲರೂ ನಮ್ಮ ಭಾರವನ್ನು ನಾಲ್ಕು ಜನರ ಮೇಲೆ ಹಾಕಲೇ ಬೇಕು.

ಹೊನ್ನು—ತೊನ್ನು ಮುಚ್ಚಲು ಇದೂ ಒಂದು ಉಪಾಯ.

ಹೊರಳುಸೇವೆ—ನಿದ್ದೆಯಿಲ್ಲದೆ ಒದ್ದಾಡುವವರ ಕಾಯಕ.

ಹೊರೆ—ನೆರೆಯವರು ನಮ್ಮನ್ನು ಹೊರೆಯಬಹುದು, ನಮಗೆ ಹೊರೆಯಾ ಗಲೂಬಹುದು.

ಹೊಲೆ—ಇದಿಲ್ಲದೆ ಹುಟ್ಟಿಲ್ಲ.

ಹೊಸಲು—ಇದನ್ನು ದಾಟಿದರೆ ಹಲವರು ಹೊಸ ಅಯ್ಯಗಳಾಗುತ್ತಾರೆ; ದಾಟಿ ಹೊರಕ್ಕೆ ಹೋದರೂ ಅಷ್ಟೆ, ಒಳಕ್ಕೆ ಬಂದರೂ ಅಷ್ಟೆ.

ಹೊಳೆ—ಕಾಲಿಲ್ಲದೆ ಹರಿಗುಂ, ತೋಳಿಲ್ಲದೆ ಹೊರುಗುಂ; ನಾಲಗಿಲ್ಲದೆ ನುಡಿಗುಂ; ಇದನ್ನು ದಾಟಿದ ಮೇಲೆ ಅಂಬಿಗ........ಕೂಲಿ ಕೇಳಿದನಂತೆ; ಹರಿವ ನದಿಗೆ ಮೈಯೆಲ್ಲ ಕಾಲು.

ಹೊಳೆಯುವುದು—ಬಟ್ಟತಲೆ.

ಹೋಗಂತಕ—ಆಗುಂತಕ ಮನೆಗೆ ಹೊರಟಾಗ.

ಹೋಗಿಬರುತ್ತೇನೆ—ಈ ಮಾತನ್ನು ನಂಟರು ಹೇಳುವಾಗ ನಮಗೆ ಬಹಳ ದುಃಖ ಬರುವುದು.

ಹೋಟಲು—ಕಾಸುಕೊಟ್ಟು ಖಾಯಿಲೆ ಕೊಂಡುಕೊಳ್ಳುವ ಸ್ಥಳ.

ಹೋತ—ಮಾರಿಯ ಕಣ್ಣು ಸದಾ ಬಿದ್ದಿರುವ ಪ್ರಾಣಿ.

ಹೋತಪ್ರೇತ—ಹೋತ, ಬಲಿಯಾದ ಮೇಲೆ.

ಹೋಪ್—ಇಂಥ ಜಾಗವೇ ಇಲ್ಲವೆಂದು ಆಂಗ್ಲೇಯರು ಹೇಳುತ್ತಾರೆ.

ಹೋಮಕೂಟ—ಹೊಗೆ ಬತ್ತಿಗರ ಕೂಟ.

ಹೋಮಾಗ್ನಿ—ಮನೆಯೊಳಗೆ ಸೇದುಬತ್ತಿ ಸೇದುವಾಗ.

ಹೋಮಂಪಾಂಟರ್—ಹೋಮದ ಹೊಗೆಯಿಂದ ಬರುವ ಕಂಬನಿ.

ಹೋರಗಿತ್ತಿ—ಜಗಳವಾಡುವ ಓರಗಿತ್ತಿ.

ಹೋಲ್ಡಾಲ್—ಹೊಟ್ಟೆ.

ಹೌದಪ್ಪ—ಈತನ ಚಾವಡಿಯಲ್ಲಿ ಹೌದಪ್ಪ ಎಂಬುದೇ ಕ್ಷೇಮ, ಅದೇ ಜಾಣತನ.

ಹೌದಾಸೀನ—ಉದಾಸೀನನಾಗಿ ಹೌದು ಎನ್ನುವುದು.

ಹೌದು—ಸಾಹೇಬರ ಪ್ರಶ್ನೆಗಳಿಗೆಲ್ಲ ಅವರು ಬಯಸುವ ಉತ್ತರ.

## ಕ್ಷ

ಕ್ಷ–ಕಿರಣ—ಎಷ್ಟು ಬೆಲೆಯ ನಾಣ್ಯವನ್ನು ಮಗು ನುಂಗಿತೆಂದು ಪತ್ತೆ ಹಚ್ಚಲು, ಉಳಿದ ಕಾಸನ್ನೆಲ್ಲ ಎಣಿಸದೆಯೇ, ಕ್ಷ–ಕಿರಣವನ್ನು ಪಯೋಗಿಸಬಹುದು.

ಕ್ಷಮಾಪಣೆ—ನಮಗಿಂತ ಬಲಯುತರಾದ ಶತ್ರುಗಳನ್ನು ನಾವು ಕ್ಷಮಾಪಣೆ ಕೇಳಲೇಬೇಕು.

ಕ್ಷಾಮಗ್ರಿ—ಕ್ಷಾಮನಿವಾರಣೆಗೆ ಒದಗುವ ಸಾಮಗ್ರಿ.

ಕ್ಷಾಮಧೇನು—ನಮ್ಮ ಮನೆಗಳಲ್ಲಿ ನಾವು ಸಾಕುತ್ತಿರುವ ಕಾಮಧೇನು.

ಕ್ಷಾಮಶಂಕೆ—ಬರಗಾಲ ಬರುವುದೋ ಎಂಬ ಭೀತಿ.

ಕ್ಷಾಮಾಕ್ಷಿ—ಬಡತನವನ್ನೇ ಸಾಹಿತ್ಯದ ಸಾಮಗ್ರಿಯಾಗಿ ಉಪಯೋಗಿಸುವ ಕವಿ.

ಕ್ಷಾಮೋದರ—ರೇಷನ್ ಕಾಲದ ಹೊಟ್ಟೆ.

ಕ್ಷೇಮಂತಋತು—ಸುಖಮಯವಾದ ಕಾಲಮಾನ.

ಕ್ಷೌರವ— ಪಾಂಡವರ ತಲೆ ಬೋಳಿಸಬೇಕೆಂದು ಕಾತುರನಾಗಿದ್ದ ಕೌರವ.

# ಮತ್ತೆ ಕೆಲವು ಅನರ್ಥಗಳು

ಏರೋಪ್ಲೇನು
ಹಾರೋಪ್ಲೇನು } ಒಂದೇ ಪ್ಲೇನಿನ ಚಲನ-ನೆಲನೆಗಳು.
ಇಳಿಯೋಪ್ಲೇನು

ಕೋಪ-ಮಂಡೂಕ : ಉಪ್ಪುಶಿಗೆಗೆ ಕುಪ್ಪಳಿಸಿ, ತಿಪ್ಪರಿಗೆಯಲಿ ಬಿದ್ದ ಕಪ್ಪೆ; ನೀನಿರುವುದು ಕೂಪ, ಎಂದಾಗ ಕಪ್ಪೆಗೂ ಕೋಪ

ನಾಮಕರಣ : ನಮಗಾಗದವರ ಹಣೆಗೆ ನಾಮ ಬಳಿಯುವ ಚಟ.

ನಾಸ್ತಿಕಥೆ : ಒಳಗೆ ದಾಸ್ತಾನು ಬಚ್ಚಿರಿಸಿಕೊಂಡು, 'ಇಲ್ಲ' ಎಂದು ಹೇಳುವ ವಿಧಾನ.

ಪಕ್ಷವಾತ : ಗಾಳಿ ಬಂದಾಗ ಈ ಪಕ್ಷದಿಂದ ಆ ಪಕ್ಷಕ್ಕೆ ತೂರಿಕೊಳ್ಳುವ ರೋಗ.

ಪಿಂಡನಾಯಕ : ಅರ್ಥ ಅಸಗತ್ಯ.

ಪೂರ್ವಪಕ್ಷ ; ಈಗಿರುವ ಪಕ್ಷದ ಹಿಂದಿನ ಪಕ್ಷ.

ಬಡವಾಗ್ನಿ : ಖಾಲಿ ಹೊಟ್ಟೆಯೊಳಗುರಿವ ಕಿಚ್ಚು.

ಭಸ್ಮ : ವಿದ್ಯಾರ್ಥಿ ಮುಷ್ಕರಗಳ ಫಲಿತಾಂಶ, ಸಾರ್ವಜನಿಕ ಸಂಚಾರ-ವ್ಯವಸ್ಥೆಯ ಮೇಲೆ.

ಭಗದತ್ತ : ಕಾಮರೂಪದ ರಾಜನ ಹೆಸರು.

ಭಾರ್ಯಾವರ್ತ : ಮಾವನ ಮನೆ.

ಭೋರ್ಗರೆಯುವುದು : ರಾಜಕೀಯ ನಾಯಕರು ಭಾಷಣ ಮಾಡುವುದು.

ಯಾ ನಿಶಾ ಸರ್ವಭೂತಾನಾಂ : ಹಿಪ್ಪಿಗಳ ಗುಂಪು.

ರುದ್ರಾಕ್ಷಿ : ಸಂನ್ಯಾಸ ಸ್ವೀಕಾರಕ್ಕೆ ಇದೇ ಮೂಲ ಕಾರಣ. (ಹೆಂಡತಿಯ ಕೆಂಪು ಕಣ್ಣು)

ಲಂಚ : ಜೀವಂತವಾಗಿರುವವರಿಗೆ ಅರ್ಪಿಸುವ ಪಿಂಡ.

ವಿಚಿತ್ರವೀರ್ಯ : ವೀರ್ಯವನ್ನು ಸಾಗಿಸಿ, ಸೇರಿಸಿ ಪಡೆದ ಸಂತಾನ.

ವಿಶ್ವಮೇಧ : ಉಚ್ಚ ರಾಷ್ಟ್ರಗಳ ನಾಯಕರು ಇದರ ಸಿದ್ಧತೆಯಲ್ಲಿದ್ದಾರೆ.

ಷಾರ್ಪನಖಿ : ಚೂಪಾದ ಉಗುರು ಹೊಂದಿರುವ ಹೆಣ್ಣು.

